# ಮುನ್ನುಡಿ

ಮುನ್ನುಡಿಯನ್ನು ಬರೆಯುವ ಉದ್ಯೋಗಕ್ಕೆ ತೀರ ಹೊಸಬನಾದ ನನ್ನಿಂದ ಅದನ್ನೇ ಅರ್ಥಾತ್ ಮುನ್ನುಡಿಯನ್ನು ಬರೆಸಬೇಕೆಂದು ಶ್ರೀ 'ವಸಂತರು' ಆಸೆಪಟ್ಟಿದ್ದಾರೆ. ಅವರ ಆಸೆಯನ್ನು ನಿರಾಶೆಗೊಳಿಸಬಾರದೆಂದು ನಾನೂ ಒಪ್ಪಿಕೊಂಡಿದ್ದೇನೆ.

ಪ್ರಸ್ತುತ 'ಸೇಡಿನ ಸರ್ಪ' ಪತ್ತೇದಾರಿ ಕಾದಂಬರಿಯು ಶ್ರೀ. ವಸಂತರ ಮೊದಲ ಕೃತಿ. ಆದರೆ ಇದನ್ನು ಓದುವಾಗ, ಓದಿದಾಗ, ಓದುಗನ ಮನದಲ್ಲಿ—

"ಈ ಕಾದಂಬರಿಕಾರನ ಹಿಂದಿನ ಕಾದಂಬರಿಗಳು ಯಾವವು?" ಎಂಬ ವಿಚಾರವು ಬಂದೇ ತೀರುತ್ತದೆ. ಏಕೆಂದರೆ ವಸಂತರು ಇದರಲ್ಲಿ ಆ ಬಗೆಯ ಮಾರ್ಗವನ್ನು ಪ್ರಥಮ ಕೃತಿಯಲ್ಲಿಯೇ ತೋರಿಸಿಬಿಟ್ಟಿದ್ದಾರೆ. ನೀರವತೆಯ, ಬಂಗ್ಲೆಯ, ಜನಸಂಚಾರವಿಲ್ಲದ ಬೀದಿಯ ವರ್ಣನೆಗಳೇ ಈ ಮಾತಿಗೆ ಸಾಕ್ಷಿಯಾಗಿವೆ.

ಇನ್ನು ಪತ್ತೇದಾರಿ ಕಾದಂಬರಿಗಳೆಂದರೆ ಓದುಗರ ಕುತೂಹಲವನ್ನು ಕೆರಳಿಸಿ, ಅವರನ್ನು ಎಲ್ಲಿಂದ ಎಲ್ಲಿಗೋ ಒಯ್ದುಬಿಡುತ್ತವೆ. ಅಷ್ಟು ಮಾಡಿದಾಗಲೇ ಅವುಗಳ ಸ್ವಾರ್ಥಕತೆಯಾಗುತ್ತದೆ. ಆ ದಿಶೆಯಲ್ಲಿ ಶ್ರೀ. ವಸಂತರು ಯಶಸ್ವಿಯಾಗಿದ್ದಾರೆಂದು ಧಾರಾಳವಾಗಿ ಹೇಳಬಹುದು.

ಈ ಕಾದಂಬರಿಯನ್ನು ಓದಿದ ನಂತರ ಇದನ್ನು ಬರೆದ ವಸಂತರು ಇನ್ನೂ ಹತ್ತೊಂಭತ್ತರಷ್ಟು ಎಳೆಯ ವಯಸ್ಸಿನ ವಿದ್ಯಾರ್ಥಿಗಳೆಂದು ಹೇಳಿದರೆ ಯಾರೂ ನಂಬಲಿಕ್ಕಿಲ್ಲ. ಆದರೆ ಇದು ಸತ್ಯ.

ಇಷ್ಟು ಚಿಕ್ಕ ವಯಸ್ಸಿನಲ್ಲಿಯೆ ಲೆಕ್ಕಣಿಕೆ ಹಿಡಿಯುವಲ್ಲಿ ಪಳಗಿದ ಶ್ರೀ. ವಸಂತರಿಗೆ ಕನ್ನಡ ಸಾರಸ್ವತಲೋಕದಲ್ಲಿ ಉಜ್ವಲ ಭವಿಷ್ಯ ಕಾದಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲವೆಂದು ನಂಬಿದ್ದೇನೆ.

**ಭಕ್ತಿ ಭಾಂಡಾರಿ**

# ಬಸವಣ್ಣನವರ ವಚನಗಳು

**ಭಾವಾರ್ಥ ಸಹಿತ**



ಸಂಪಾದಕರು : **೧೦೮ ಪುಟಗಳು**

**"ಕರ್ನಾಟಕ ಕವಿಚಂದ್ರ"**

**ಶ್ರೀಕಂಠಶಾಸ್ತ್ರಿ** **ಬೆಲೆ : ೮ ಆಣೆ ಮಾತ್ರ**

## —ಕೆಲವು ಅಭಿಪ್ರಾಯಗಳು—

ಬಸವಣ್ಣನವರ ತತ್ತ್ವಬೋಧೆ, ಧರ್ಮ-ವೇದಾಂತಗಳ ಪರಿಚಯ ಬಯಸು ವವರಿಗೆ ಯೋಗ್ಯ ಗ್ರಂಥವಿದು. "ತಾಯಿನಾಡು" ೨೧-೬-೫೪

ಈ ಕಿರುಗ್ರಂಥದಲ್ಲಿ ಬಸವಣ್ಣನವರ ಸಾವಿರಾರು ವಚನಗಳಲ್ಲಿಯ ೩೨೬ ವಚನಗಳನ್ನು ಸಂಕಲಿಸಿ, ಭಾವಾರ್ಥದೊಡನೆ, ಶ್ರೀಕಂಠ ಶಾಸ್ತ್ರಿಗಳವರು ಅಳವಡಿಸಿದ್ದಾರೆ... ಈ ಗ್ರಂಥಕ್ಕೆ ನಮ್ಮ ಹೃತ್ಪೂರ್ವಕ ಸ್ವಾಗತವಿದೆ.

"ಪ್ರಜಾವಾಣಿ" ೨೭—೬—೫೪

ಮನುಷ್ಯರ ಅಜ್ಞಾನವನ್ನು ಪರಿಹರಿಸಿ ಅವರಲ್ಲಿ ಮಾನವೀಯ ಭಾವನೆಗಳನ್ನು ಪ್ರಚೋದಿಸುವಂಥ ನೀತಿ ಸೂತ್ರಗಳನ್ನು ಸರಳವಾಗಿ, ಹೃದಯಸ್ಪರ್ಶಿಯಾಗಿ ವಿವರಿಸಿದುದೇ ಬಸವಣ್ಣನವರ ವಚನಗಳ ವೈಶಿಷ್ಟ್ಯವಾಗಿದೆ. ಈ ಪುಸ್ತಕದಲ್ಲಿ ಅಂತಹ ಕೆಲವು ಶ್ರೇಷ್ಠ ವಚನಗಳನ್ನು ಶ್ರೀ ಶಾಸ್ತ್ರಿಗಳು ಸಂಗ್ರಹಿಸಿ ಅವುಗಳ ಭಾವಾರ್ಥವನ್ನು ಕೊಟ್ಟಿರುವರು. "ರಾಷ್ಟ್ರಮತ" ೨-೭-೫೪

ಪ್ರಾಚೀನವಾದ ಉಪನಿಷತ್ತು, ಗೀತೆ ಮತ್ತಿತರ ಶಾಸ್ತ್ರ ಗ್ರಂಥಗಳಲ್ಲಿ ಪ್ರತಿಪಾದಿಸಿದ ಘನತತ್ತ್ವಗಳನ್ನು ಭಟ್ಟಿ ಇಳಿಸಿ, ಕನ್ನಡಿಗರಿಗೆ ರಸಪಾಕವನ್ನು ಉಣಬಡಿಸಿದಂತೆ ಈ ವಚನಗಳು ಇವೆಯೆಂದರೆ ತಪ್ಪಾಗದು.

"ನವಯುಗ" (ಮಂಗಳೂರು) ೨೪-೬-೫೪

ಪ್ರಾಸಂಗಿಕವಾಗಿ ಉದಾಹರಿಸಲು ಮತ್ತು ಜೀವನ ಸಮಸ್ಯೆಗಳನ್ನೆದುರಿಸುವ ಧೈರ್ಯಮಾಡಲು ಈ ವಚನಸಂಗ್ರಹ ಅಮೂಲ್ಯವಾಗಿದೆ. "ಕರ್ಮವೀರ" ೨೧-೨-೫೫

**ಸಿಟಿ ಬುಕ್ ಸ್ಟಾಲ್,** ದುರ್ಗದಬೈಲ್, **ಹುಬ್ಬಳ್ಳಿ**

ಸುರಿಯುವ ಮಳೆಗೆ ಸರಿಯುವ ಯೋಚನೆಯಿರಲಿಲ್ಲವೆಂದು ಆ ಪ್ರಸಂಗಾವಲೋಕನ ಮಾಡಿದವರು ನಿರ್ವಿವಾದವಾಗಿ ಒಪ್ಪಿಕೊಳ್ಳಬಹು ದಾಗಿತ್ತು. ಸುರಿಯುವ ಜಡಿಮಳೆ ಬಾನಿನೊಂದಿಗೆ ಬುವಿಯನ್ನು ಹೆಣೆ ಯುತ್ತಿದ್ದಂತಿತ್ತು. ದಾರಿಯಲ್ಲಿರುವ ಕಂಟಿಗಳ ಬೆಂಬದಿಯಿಂದ ಹಣಿಕಿಕ್ಕಿ ಪ್ರಸನ್ನವದನ ತೋರಿಸುವ ಹೂವಿನಂತೆ, ಮೋಡಗಳ ಬೆಂಬದಿಯಿಂದ ಮಿಂಚು ಆಗೀಗಚಕ್ಕನೆಮಿಂಚಿಮರೆಯಾಗುತ್ತಿತ್ತು. ಮಳೆಯಿಂದ ಬೀಳುವ ನೀರ್ವನಿಗಳೊಳಗೆ ಇಲೆಕ್ಟ್ರಿಕ್ ದೀಪದ ಬೆಳಕು ಪ್ರತಿಬಿಂಬಿಸಿ ಅವನ್ನು ಹೊಳೆವ ಮಾಣಿಕ್ಯಗಳಾಗಿ ಪರಿವರ್ತಿಸುತ್ತಿತ್ತು. ಟಾರ ರೋಡು ಮಳೆಯ ನೀರಿನಿಂದ ಆಚ್ಛಾದಿತವಾಗಿ ಖಡ್ಗದ ಧಾರೆಯು ಮಿಂಚುತ್ತಿದಂತೆ ದೀಪದ ಪ್ರಕಾಶದಿಂದ ಹೊಳೆಯುತ್ತಿತ್ತು. ಕಾನನದಲ್ಲಿಯ ಕೇಸರಿಗರ್ಜನೆ ಬೆಟ್ಟ ಗುಡ್ಡಗಳಲ್ಲಿ ಅಲೆದು ಮಾರ್ದನಿಗೊಂಡು ಎಲ್ಲ ಪ್ರಾಣಿಗಳು ಭೀತಿಯಿಂದ ಕಂಪಿಸುವಂತೆ, ಸಿಡಿಲು ಕಟ್ಟಡಗಳ ಬದಿಯಿಂದ ಪ್ರತಿಧ್ವನಿಸಿ ಜನಪೆದೆ ಯನ್ನು ನಡುಗಿಸುತ್ತಿತ್ತು. ಜನ ಅಲ್ಲಲ್ಲಿ ಒಬ್ಬೊಬ್ಬರಂತೆ ಅಲೆದಾಡುತ್ತಿ ದ್ದರು. ಜನರ ಕೈಕಾಲನ್ನೆ ಮಳೆ ತನ್ನ ಸಾಮರ್ಥ್ಯದಿಂದ ಬಿಗಿದಿತ್ತು. ಅಲ್ಲಲ್ಲಿ ಅಂಗಡಿಗಳ ಬದಿಯಲ್ಲಿ ಜನರು ಮಳೆಯ ಕಾಟದಿಂದ ಪಾರಾಗಲು ನಿಂತು ಆಗಾಗ ಹೊರಗೆ ಒಂದು ನೋಟವನ್ನು ಚೆಲ್ಲಿ 'ಲೊಚ್' 'ಲೊಚ್' ಎಂದು ಅದರ ರಬಸದ ಬೀಳುವಿಕೆಗೆ ಗುಣಗುಟ್ಟಿ ತಮ್ಮ ಅಸಮಾಧಾ ನವನ್ನು ವ್ಯಕ್ತ ಮಾಡುತ್ತಿದ್ದರು. ಆಗೀಗ ಸುಳಿದು ಮಾಯವಾಗುವ ಕಾರುಗಳ ಜೋರಿಗೆ ಮಳೆಯ ನೀರು ಜಿಲ್ಲೆಂದುಸಿಡಿದು ಕಾರಿನ ಬೆಳಕಿನಲ್ಲಿ ಮಿಂಚು ಹುಳಗಳಂತೆ ಹೊಳೆದು ನಾಶವಾಗುತ್ತಿತ್ತು. ಕತ್ತಲೆಯ ತೆರೆ ಎಲ್ಲೆಡೆಗೆ ಬಿದ್ದು ನಗರ ನಿಸ್ತಬ್ಧವಾಗಿ ಯಾವದೋಮತ್ತಿನಲ್ಲಿ ಮಲಗಿದಂತೆ ಕಾಣುತ್ತಿತ್ತು ಆ ದೃಶ್ಯ.

ಮಾಡರ್ನ ಕೇಫೆಯ ಎದುರುಗಡೆ ನಿಂತಿರುವ ಕಾರಿನಲ್ಲಿ ಕಿಟಕಿಯ ಬಾಗಿಲುಗಳನ್ನು ಹಾಕಿ ವೀಣಾ ಬೆಚ್ಚಗೆ ಕುಳಿತಿದ್ದಳು. ಮಳೆಯ ಆರ್ಭ

ಟವನ್ನು ಕಾರಿನಿಂದಲೇ ನೋಡುತ್ತ ತನ್ನಷ್ಟಕ್ಕೆ ತಾನೆ ಯೋಚನೆಗಳ ಅಲೆಗಳಲ್ಲಿ ತೇಲುತ್ತಿದ್ದಳು. ಕಣ್ಣುಗಳು ಸ್ಥಿರವಾಗಿ ಒಂದೆ ಕಡೆಗೆ ದೃಷ್ಟಿಯನ್ನು ಬೀರುತ್ತಿದ್ದರೂ ಅಸ್ಥಿರವಾದ ಅವಳ ಮನ ಎಲ್ಲೆಲ್ಲಿಯೋ ಅಲೆಯುತ್ತಿತ್ತು. ಅವಳ ಇಲ್ಲಿಗೆ ಬರುವಿಕೆ ತೀರ ಆಕಸ್ಮಿಕವಾದುದಾಗಿತ್ತು. ಅವಳು ಅವನ್ನೆ ಕುರಿತು ಯೋಚಿಸಿ ಅಚ್ಚರಿಪಡುತ್ತಿದ್ದಳು. ಅವಳ ಅಜ್ಜ ಅಶ್ವತ್ಥರಾಯ ಕಳುಹಿದ ಟೆಲಿಗ್ರಾಮನ್ನು ಕಂಡು ವೀಣಾ ಕಡು ಆಶ್ಚರ್ಯಗೊಂಡಿದ್ದಳು. ಇನ್ನು ತನಗೆ ಭಾರತದ ಸಂಪರ್ಕವೇ ಬರಲಾರದೆಂದು ಗ್ರಹಿಸಿದ ಅವಳ ತಿಳುವಳಿಕೆ ಬುಡಮೇಲಾಗಿತ್ತು. ತನ್ನ ತಾಯಿಯನ್ನು ಕಂಡರೆ ಅಜ್ಜನಿಗೆ ಆಗಿಬರುತ್ತಿರಲಿಲ್ಲವೆಂಬ ವಿಷಯ ಅವಳಿಗೇನೂ ಹೊಸದಲ್ಲ. ಅದರ ಕಾರಣವು ಅವಳಿಗೆ ಸ್ಫುಟವಾಗಿ ತಿಳಿದಿದೆ. ತನ್ನ ತಾಯಿ ತಂದೆಯ ಆಜ್ಞೆಯನ್ನು ಮೀರಿ ಆದ ಎರಡನೆಯ ಮದುವೆಯೆ ಅಜ್ಜನ ದ್ವೇಷಕ್ಕೆ ಕಾರಣ. ಅಜ್ಜ ತನ್ನ ಮಗಳನ್ನು ಮೊದಲು ಅಮಿತ ಪ್ರೀತಿಯಿಂದ ಕಾಣುತ್ತಿದ್ದನಂತೆ. ಆದರೆ ಈ ಘಟನೆಯು ಸಂಭವಿಸಿದ ಮೇಲೆ ಅವರವರ ಬಾಂಧವ್ಯದ ಶೃಂಖಲೆಯು ಕಳಚಿತ್ತು. ವೀಣಳಿಗೆ ಅಜ್ಜನ ನೆರವು ಚನ್ನಾಗಿತ್ತು. ಅಜ್ಜನ ತಾನು ನೆಚ್ಚಿನ ಮೊಮ್ಮಗಳೆಂದು ಅವಳಿಗೆ ಹೆಮ್ಮೆಯ ವಿಷಯವಾಗಿತ್ತು. ಅಶ್ವತ್ಥರಾಯರು ತನಗಾಗಿ ಆಗೀಗ ಸಿಲೋನಕ್ಕೆ ಬಂದುಹೋಗುತ್ತಿದ್ದ ಸಂಗತಿ ಅವಳ ನೆನವಿನಿಂದ ಮರೆಯಾಗಿರಲಿಲ್ಲ. ಹಲವು ಸಾರೆ ತನ್ನ ತಾಯಿಯ ಬಾಯಿಯಿಂದ ಅಜ್ಜನ ನಡುವಳಿಕೆ ಸರಿಯಾಗಿರಲಿಲ್ಲವೆಂದು ಅವಳು ಕೇಳಿದ್ದಳು. ಆದರೆ ವೃದ್ಧಾವಸ್ಥೆಯನ್ನು ತಲುಪಿದ ಮೇಲೆ ಅಜ್ಜನ ಕ್ರೂರತನದ ನಡತೆ ಬದಲಾಗಿ ಅಲ್ಲಿ ಸಭ್ಯತನದ ಆಡಳಿತ ನಡೆದಿತ್ತೆಂಬ ವಿಷಯ ಅವಳಿಗೆ ಈಗೀಗ ತಿಳಿದು ಬಂದಿತ್ತು.

ಅಜ್ಜನನ್ನು ಕಂಡರೆ ಅವಳಿಗೂ ಬಹಳ ಪ್ರೀತಿ. ತನ್ನ ತಾಯಿಯಲ್ಲದೆ ಅಶ್ವತ್ಥರಾಯನಿಗೆ ನಾಲ್ಕು ಜನ ಗಂಡುಮಕ್ಕಳು ನಾಲ್ವರಲ್ಲಿ ಇರ್ವರೂ ಮಾತ್ರ ಕೆಲಸ ಮಾಡುತ್ತಿದ್ದರು. ಉಳಿದಿಬ್ಬರೂ ತಮ್ಮ ತಂದೆಯ ಆಸ್ತಿಯ ಮೇಲೆಯೇ ಉಪಜೀವನವನ್ನು ಸಾಗಿಸುತ್ತಿದ್ದರು. ಅಜ್ಜನ ಆಸ್ತಿ ವಿಪುಲವಾಗಿತ್ತು. ಭಂಗಾರದ ವ್ಯವಹಾರದಲ್ಲೋ ಅಥವಾ ಮತ್ಯಾವದೋ ವ್ಯವಹಾರದಲ್ಲಿ ನಿಧಿಯನ್ನು ಸಂಗ್ರಹ ಮಾಡಿದ್ದ. ತರುಣನಿದ್ದಾಗ ತನ್ನ

ದುರಾಚರಣೆಯ ನಿಮಿತ್ತವಾಗಿ ಗಳಿಸಿದ ಅಪಖ್ಯಾತಿಯಿಂದ ಅವನಮಕ್ಕಳು ಸಹ ಅವನನ್ನು ತಿರಸ್ಕರಿಸುತ್ತಿದ್ದರು. ವೀಣಳಿಗೆ ಅಜ್ಜನ ಮನೆಯನ್ನು ಮತ್ತೊಮ್ಮೆ ನೋಡುವ ಉತ್ಸುಕತೆಯಿತ್ತು. ಆದ ಕಾರಣವೇ ಅವಳು ಟೆಲಿಗ್ರಾಮನ್ನು ಕಂಡ ಕೂಡಲೆ ತಾಯಿಯು ತಡೆಯನ್ನುಂಟುಮಾಡಿದರೂ ಕೇಳದೆ ಹೊರಟುಬಂದಿದ್ದಳು. ಅವಳ ಮನದಂತರಾಳದಿಂದ ಅನೇಕ ಹಿಂದಿನ ನೆನಹುಗಳು ಬೆಳಗಿ ಮಾಯವಾಗುತ್ತಿದ್ದವು. ಯೋಚನೆಯ ಮಡುವಿನಲ್ಲಿ ಈಜುವವಳಿಗೆ ಯಾವುದರ ಪರಿವೆಯೂ ಇದ್ದಂತಿರಲಿಲ್ಲ. ಡ್ರಾಯವ್ಹರ ಈಗ ಬರುವೆನೆಂದು ಹೇಳಿಹೋಗಿ ಸುಮಾರು ನಾಲ್ವತ್ತು ನಿಮಿಷಗಳು ಅವಳಿಗರವಿಲ್ಲದಂತೆ ಉರುಳಿದ್ದವು. ಆ ರೀತಿಯಾಗಿ ಒಬ್ಬಳೆ ಕುಳಿತುದು ಈಗ ಅವಳಿಗೆ ಬಹಳ ಬೇಸರವನ್ನು ತರುತ್ತಿತ್ತು. ವಾಚನ್ನು ಒಮ್ಮೆ ನೋಡಿದಳು. ೫—೩೦ ಆಗಿತ್ತು. ಆಗಲೆ ಬೀದಿಯೆಲ್ಲ ಬಂದಾಗುತ್ತ ನಡೆದಿತ್ತು. ಮಳೆ ಒಂದು ಹದಕ್ಕೆ ಬಂದು ಆಕಾಶವೆಲ್ಲ ನಿರಭ್ರವಾಗಿತ್ತು. ಚಳಿ ಮೆಲ್ಲಮೆಲ್ಲನೆ ತನ್ನ ವಜ್ರಮುಷ್ಟಿಯನ್ನು ಬಲಪಡಿಸುತ್ತಿತ್ತು ವೀಣಳಿಗೆ ಒಬ್ಬಳೆ ಕುಳಿತು ಬೇಸರ ಬರುತ್ತಿದ್ದಂತೆ ಭೀತಿಯು ಮೆಲ್ಲನೆ ಆವರಿಸಲಾರಂಭಮಾಡಿತು. ಡ್ರಾಯವ್ಹರ ಹೋದವನು ಅಲ್ಲಿಯೇ ಗುಪ್ತವಾಗಿಬಿಟ್ಟ. ಅವನು ಹೋಗಿ ಸುಮಾರು ಒಂದು ತಾಸು ಕಳೆದಿತ್ತು. ಇನ್ನು ೫ ನಿಮಿಷದಲ್ಲಿ ಅವನು ಬರದಿದ್ದರೆ ತಾನೇ ಕಾರನ್ನು ನಡಿಸಿಕೊಂಡು ಹೋಗುವದಾಗಿ ಯೋಚಿಸಿ ಸುತ್ತಲೂ ಮತ್ಯಾವದಾದರೂ ವಾಹನವಿರುವದೆ ಎಂದು ನೋಡಿದಳು. ಆದರೆ ಬೀದಿಯೆಲ್ಲ ಶೂನ್ಯವಾಗಿತ್ತು. ಇಂಥ ರಾತ್ರಿಯಲ್ಲಿ ನಡೆದು ಹೋಗುವದೆಂದರೆ ಅವಳಿಗೆ ಸಾಧ್ಯವಿರಲಿಲ್ಲ. ಡ್ರಾಯವ್ಹರನಿಗೆ ಆಗಲೆ ಅವಳು ಅಶ್ವತ್ಥರಾಯರ ಅಡ್ರೆಸ್ಸನ್ನು ತಿಳಿಸಿದ್ದಳು. ಅವನು ಈ ಮೊದಲು ಅಶ್ವತ್ಥರಾಯರ ಮನೆಯನ್ನು ನೋಡಿರುವೆನೆಂದು ತಿಳಿಸಿದ್ದ ಅಶ್ವತ್ಥರಾಯನಂತಹ ಕುಬೇರನನ್ನು ಅರಿಯದವರು ಅಲ್ಲಿ ವಿರಳವಾಗಿದ್ದರೆಂದು ಹೇಳಬಹುದು.

ವೀಣಾ ಕಾರನ್ನು ತಾನೆ ಸ್ಟಾರ್ಟ ಮಾಡಿದಳು. ಕಾರು ನೀರನ್ನು ಚೆಲ್ಲನೆ ಸಿಡಿಸುತ್ತ ಹವೆಯನ್ನು ತೂರಿದುಕೊಂಡು ರಭಸದಿಂದ ಮುಂದೆ ಸಾಗಿತು. ಮನೆಯ ನೆನಪು ಅವಳಿಗೆ ಚೆನ್ನಾಗಿತ್ತು. ೧೦—೧೫ ನಿಮಿಷ

ಗಳಲ್ಲಿ ಅಶ್ವತ್ಥರಾಯರ ಭವ್ಯ ಕಟ್ಟಡದೆದುರಿಗೆ ವೀಣಳ ಕಾರು ನಿಂತು ಕೊಂಡಿತು. ಬಂಗಲೆಯ ಎದುರಿಗೆ ವಿಶಾಲವಾದ ಕಂಪೌಂಡು. ಅದರಲ್ಲಿ ಅನೇಕ ಹೂವಿನ ಗಿಡಗಳು. ದೊಡ್ಡ ದೊಡ್ಡ ಗಿಡಗಳು ಬೆಳೆದು ಆ ನಿಶೆ ಯಲ್ಲಿ ಒಂದು ಬಗೆಯ ಭೀತಿಯ ಕಂಪನವನ್ನುಂಟುಮಾಡುತ್ತಿದ್ದವು. ಹೊರಗೆ ಚಳಿ ವಿಶೇಷವಾಗಿತ್ತು. ವೀಣಾ ಉಲನ್ ಕೋಟನ್ನು ಧರಿಸಿ ದ್ದರೂ ನಡಗುತ್ತಿದ್ದಳು. ಸುತ್ತಲೂ ಒಮ್ಮೆ ದೃಷ್ಟಿಯನ್ನು ತೂರಿದಳು. ಗಿಡಬಳ್ಳಿಗಳು, ಚಿಕ್ಕ ಮಕ್ಕಳು ಸ್ನಾನಮಾಡಿ ಆನಂದದಿಂದ ನಿಂತಂತೆ, ಉಲ್ಲಸಿತವಾಗಿ ಅತ್ತಿತ್ತ ತೂಗಾಡುತ್ತಿದ್ದವು. ಗೇಟಿಗೆ ಅಶ್ವತ್ಥರಾಯರ ಹೆಸರಿನ ಬೋರ್ಡೊಂದನ್ನು ಹಾಕಲಾಗಿತ್ತು. ವೀಣಾ ಗೇಟಿನ ಬಾಗಿ ಲನ್ನು ತೆಗೆದಳು. ಅವಳ ಮೃದು ಹಸ್ತಗಳು ಚಳಿಯಿಂದ ನಡುಗುತ್ತಿದ್ದವು. ಅಷ್ಟು ದೊಡ್ಡ ಬಂಗಲೆಯಲ್ಲಿ ಬೆಳಕಿನ ಸುಳಿವು ಕಾಣುತ್ತಿರಲಿಲ್ಲ. ಅದನ್ನು ನೋಡಿ ವೀಣಳಿಗೆ ತುಂಬ ಆಶ್ಚರ್ಯವಾಯಿತು. ತಾನು ಬರುವದು ಇವ ರಿಗೆ ತಿಳಿದಿಲ್ಲವೆಂದು ಕಾಣುತ್ತದೆ. ೩-೪ ಆಳುಗಳಿದ್ದರೂ ಒಬ್ಬರಾದರೂ ಇಲ್ಲವೆಂದು ಚಿಂತಿಸುತ್ತ ಮುಂದುವರೆದಳು. ಕೈಯಲ್ಲಿ ಒಂದು ಟಾರ್ಚನ್ನು ಹಿಡಿದಿದ್ದಳು. ತಲೆವಾಗಿಲ ಹತ್ತಿರ ಹಲವು ತರದ ಬಳ್ಳಿಗಳಿಂದ ಸುಂದರ ವಾದ ಒಂದು ಹಂದರವನ್ನು ರಚಿಸಲಾಗಿತ್ತು. ಆ ನಿಶೆಯಲ್ಲಿ ಹೂವಿನ ಸುವಾಸನೆ ಅನಿಲದೊಡನೆ ಒಂದಾಗಿ ಉಸಿರಾಡಿಸಲು ಬಹಳ ಮಧುರವಾ ಗಿತ್ತು. ದೂರ ದೂರದ ವರೆಗೆ ಆ ಸುವಾಸನೆ ಈಡುಗಿತ್ತು. ವೀಣಾ ತಲೆ ಬಾಗಿಲನ್ನು ದೂಡಿದಳು. ಅದು ಯಾವ ಸದ್ದಿಲ್ಲದೆ ತೆರೆದುಕೊಂಡಿತು. ಒಂದು ಕ್ಷಣ ಅವಳು ಒಳಗೆ ಹೋಗಲೋ ಬೇಡವೋ ಎಂದು ಅನುಮಾನಿ ಸಿದಳು. ಸುತ್ತಲೂ ಯಾರಾದರೂ ಆಳುಗಳಿರುವರೇನೋ ಎಂದು ನೋಡಿ ದಳು. ಅವರ ಹೆಸರನ್ನಿತ್ತು ಕೂಗಿದಳು. ಆದರೆ ಆ ಮೌನದಲ್ಲಿ ಅವಳ ಧ್ವನಿ ಅವಳಿಗೆ ಮಾರುತ್ತರವನ್ನು ನೀಡಿತು. ತಾನೆ ಧೈರ್ಯದಿಂದ ಮನೆ ಯೊಳಗೆ ಪ್ರವೇಶಿಸಿದಳು. ಸುತ್ತಲೂ ಟಾರ್ಚಿನ ಬೆಳಕು ದುಂಡಗಾಗಿ ಅಲ್ಲಿಯ ಗೋಡೆಗಳ ಮೇಲೆ ವಸ್ತುಗಳ ಮೇಲೆ ಬಿದ್ದು ಜಾರಿ ಹೋಗು ತ್ತಿತ್ತು. ಗೋಡೆಯ ಮೇಲೆ ಒಂದೆಡೆಗೆ ಲಾಯಿಟಿನ ಸ್ವಿಚ್ಚುಗಳಿದ್ದವು. ಅದನ್ನು ಮೆಲ್ಲನೆ ಅದರೆಡೆಗೆ ಸಾಗಿದಳು. ಅವಳು ಸ್ವಿಚ್ಚಿಗೆ ಹತ್ತಿರ ಬರು

ವಾಗ ಅವಳ ಕಾಲಿಗೆ ಮೆತ್ತಗಿನ ಯಾವದೋ ಪದಾರ್ಥ ತಗುಲಿದಂತಾಯಿತು. ಕೂಡಲೆ ಅವಳ ಎದೆ ಒಡೆಯಿತು, ಕೈಯಲ್ಲಿಯ ಟಾರ್ಚ್ಚು ಉರುಳಿತು. ಕೈ ಕಾಲಿನಲ್ಲಿಯ ಶಕ್ತಿ ಹೋದಂತೆನಿಸಿ, ಚಿಟ್ಟನೆ ಚೀರುವಂತಾಯಿತವಳಿಗೆ. ಕೂಡಲೆ ದ್ವೀಪದ ಸ್ವಿಚ್ಚನ್ನು ಒತ್ತಿದಳು. ಪ್ರಕಾಶ ಕತ್ತಲೆಯನ್ನು ಹೊರದೂಡಿ ತನ್ನ ಪ್ರಭಾವವನ್ನು ಬೀರಿತು. ಕಾಲಿನ ಹತ್ತಿರ ನೋಡಿದಳು. ಅದನ್ನು ನೋಡಿ ಅವಳಿಗೆ ತಡೆಯಲಾರವ ನಗುಬಂದಿತು. ಕರಿಯದಾದ ಒಂದು ಬೆಕ್ಕು ತನ್ನ ಮೈಯನ್ನು ಅವಳ ಕಾಲಿಗೆ ತಿಕ್ಕುತ್ತಿತ್ತು. ಅದನ್ನು ಹೊಡೆದು ಓಡಿಸಿದಳು. ಮತ್ತೆ ಅದು 'ಮ್ಯಾಂವ' ಎಂದು ಒದರುತ್ತ ಅವಳ ಹತ್ತಿರಕ್ಕೆ ಬರುತ್ತಿತ್ತು. ಅದಕ್ಕೆ ಹಾಲನ್ನು ಯಾರೂ ಹಾಕಿರಲಿಲ್ಲವೆಂದು ಕಾಣುತ್ತದೆ.

ಪಡಸಾಲೆ ವಿಶಾಲವಾಗಿತ್ತು. ಆಧುನಿಕ ರೀತಿಯ ಕೋಚು, ಟೀಪಾಯಗಳಿಂದ ಸುಸಜ್ಜಿತವಾಗಿತ್ತು. ಕಾಲ ಕೆಳಗೆ ಹಸಿರು ಬಣ್ಣದ ಮ್ಯಾಟು ಹಾಸಲಾಗಿದ್ದಿತು. ಬಲಗಡೆಗೆ ಎರಡು ರೂಮುಗಳು, ನಡುವೆ ಅಡುಗೆ ಮನೆ, ಬಚ್ಚಲುಮನೆಗೆ ಹೋಗಲು ಬಾಗಿಲಿತ್ತು, ಅದು ತೆರೆದುಕೊಂಡಿತ್ತು. ಎಡಗಡೆಗೆ ಮೇಲೆ ಹೋಗಲು ಮೆಟ್ಟಲುಗಳಿದ್ದವು. ಅಡುಗೆಯ ಮನೆಯಲ್ಲಿ ಯಾರಾದರೂ ಇರುವರೇನೋ ಎಂದು ಹೋಗಿ ನೋಡಿದಳು. ಆದರೆ ಯಾರೂ ಇರುವಂತೆ ಕಂಡುಬರಲಿಲ್ಲಿ. ತಿರುಗಿ ಮತ್ತೆ ಪಡಸಾಲೆಗೆ ಬಂದು ಚೇರಿನ ಮೇಲೆ ಒಂದು ನಿಮಿಷ ಕುಳಿತು ಸುತ್ತಲೂ ಒಮ್ಮೆನೋಡಿ ಮೇಲೆ ಏರತೊಡಗಿದಳು. ಮೇಲೆಯೂ ಸ್ಥಳ ವಿಶಾಲವಾಗಿತ್ತು. ಅಶ್ವತ್ಥರಾಯರ ನಿವಾಸ ಮೇಲೆಯೆ. ಎದುರಿಗೆ ಅಶ್ವತ್ಥರಾಯನ ದೊಡ್ಡ ಕೊಟಡಿ. ಅದಕ್ಕೆ ಸ್ವಲ್ಪ ದೂರವಾಗಿ ಬೇರೆರೆಡು ಕೊಟಡಿಗಳಿದ್ದವು. ಅಜ್ಜನ ಕೊಟಡಿಯ ಬಾಗಿಲನ್ನು ವೀಣಾ ದೂಡಿದಳು ಅದು 'ಕಿರ್‍ರಿಂ'ದು ಶಬ್ದಮಾಡಿ ತೆರೆದುಕೊಂಡಿತು. ಒಂದೆರಡು ಸಲ ಅಜ್ಜನ ಹೆಸರಿನಿಂದ ಕರೆದಳು. ಆದರೆ ಯಾವ ಉತ್ತರವೂ ಬರಲಿಲ್ಲ. ಮೆಲ್ಲನೆ ಅಡಿಗಳನ್ನಿಡುತ್ತ ಒಳಗೆ ಪ್ರವೇಶಿಸಿ ಬದಿಯಲ್ಲಿದ್ದ ದೀಪದ ಸ್ವಿಚ್ಚನ್ನು ಅದುಮಿದಳು. ಝುಗ್ಗನೆ ಬೆಳಕು ಎಲ್ಲೆಡೆಗೆ ಪಸರಿಸಿತು. ಎದುರಿನ ದೃಶ್ಯವನ್ನು ನೋಡಿ ಚಿಟ್ಟನೆ ಚೀರಿದಳು. ಆ ಭಯಾನಕ ದೃಶ್ಯವನ್ನು ಅವಳಿಂದ ಹೆಚ್ಚು

ಹೊತ್ತು ನೋಡುವದಾಗಲಿಲ್ಲ. ನೋಡುವವರ ಎದೆಯನ್ನು ತಲ್ಲಣಿಸು ವಂಥ ಸನ್ನಿವೇಶ. ಅಶ್ವತ್ಥರಾಯರು ಕೆಳಗೆ ಮುಖ ಮಾಡಿಕೊಂಡು ಬಿದ್ದಿದ್ದರು. ಸುತ್ತಲೂ ರಕ್ತ ಮಡುವುಗಟ್ಟಿ ನಿಂತಿತ್ತು. ಕುತ್ತಿಗೆಯ ಬದಿ ಯಿಂದ ರಕ್ತವು ಹರಿದು ಬರುತ್ತಿತ್ತು. ಅರ್ಧದ ವರೆಗೆ ಕುತ್ತಿಗೆಯನ್ನು ಕೊಯ್ದು ಕಗ್ಗೊಲೆಯನ್ನು ಅತಿ ಕ್ರೂರತೆಯಿಂದ ಮಾಡಲಾಗಿತ್ತು. ಅವರ ಬಿಳಿಯದಾದ ಕೂದಲುಗಳು ಗಾಳಿಯ ಬೀಸುವಿಕೆಯಿಂದ ಹಾರಾಡುತ್ತಿ ದ್ದವು. ವೀಣಾ ಚಟ್ಟನೆ ಮುಖದಿರುವಿ ಬಾಗಿಲೆಡೆಗೆ ಹೊರಳಿದಳು. ಆದರೆ ಅಲ್ಲಿಯ ದೃಶ್ಯವನ್ನು ಕಂಡು ಅವಳು ಮೂರ್ಛಿತಳಾಗಿ ಕೆಳಗೆಉರುಳಿದಳು. ಬಾಗಿಲ ಹೊಸ್ತಿಲ ಮೇಲೆ ಒಬ್ಬ ಸೂಟುಧಾರಿ ಯುವಕ ತನ್ನ ಎರಡು ಕೈಗಳನ್ನು ಜೇಬಿನಲ್ಲಿ ಹಾಕಿಕೊಂಡು ತದೇಕ ಚಿತ್ತವಾಗಿ ಅವಳನ್ನು ನೋಡುತ್ತಿದ್ದ.

ನಾರಾಯಣ ಪೋಲೀಸ ಸ್ಟೇಶನ್ನಿನಲ್ಲಿ ಒಂದು ಚೇರಿನಮೇಲೆ ತಾರಸಿಯನ್ನು ನೋಡುತ್ತ ಯೋಚನಾ ಮಗ್ನನಾಗಿದ್ದ. ದುಃಖಮಿಶ್ರಿತವಾದ ಭಯದ ಕಾರ್ಮೋಡಗಳು ಅವನ ಮುಖದಮೇಲೆ ಸುಳಿದು ಮಾಯವಾಗುತ್ತಿದ್ದವು. ತನ್ನ ತಂದೆಯ ಕೊಲೆಯ ಸುದ್ದಿ ಅವನಿಗೆ ಬರಸಿಡಿಲಿನಂತೆ ತಾಗಿತ್ತು. ಪ್ರಚಂಡ ಅಲೆಗಳ ಮಧ್ಯದಲ್ಲಿ ಸಿಲುಕಿದ ಡೋಣಿಯಂತೆ ಅವನ ಮನ ಹೊಯ್ದಾಡುತ್ತಿದ್ದಿತು. ತನ್ನ ತಂದೆಯ ಕೊರಳನ್ನು ಆಡುಕುರಿಗಳ ವಧೆ ಮಾಡುವಂತೆ ನಿರ್ದಯತೆಯಿಂದ ಕತ್ತರಿಸಿ ಹಾಕಲಾಗಿತ್ತು. ಏಕಾಏಕಿಯಾಗಿ ಈ ಭೀಕರವಾದ ಕೊಲೆಯ ಘಟನೆಯನ್ನು ನೋಡಿ ಅವನಿಗೆ ಆಶ್ಚರ್ಯವುಂಟಾದಂತೆ ಅದರೊಡನೆ ಅಪರಿಮಿತ ಭಯವು ಸೇರಿಕೊಂಡಿತ್ತು. ತನ್ನ ತಂದೆಯ ಕೊಲೆ ಮಾಡುವಂಥ ವ್ಯಕ್ತಿಗಳಾರಿರುವರೆಂಬುದನ್ನು ಯೋಚಿಸಿದ. ಆದರೆ ಅದು ಅವನ ಸ್ಮೃತಿಶಕ್ತಿಗೆ ಎಟುಕದ ಸಂಗತಿಯಾಗಿತ್ತು. ಈ ಊರಿನಲ್ಲಿ ಇರುವವನೆಂದರೆ ಈಗ ಅವನೊಬ್ಬನೆ. ಅವನ ತಮ್ಮ ಶೇಖರ ಮುಂಬಯಿಗೆ ಹೊರಟುಹೋಗಿದ್ದ. ಅವನ ಉಳಿದಿಬ್ಬರು ತಮ್ಮಂದಿರು ದೂರ ಪ್ರದೇಶಗಳಲ್ಲಿ ಕೆಲಸ ಮಾಡುತ್ತಿದ್ದರು. ಅದೇ ದಿನ ಅವನು ಪಿಕ್ಚರು ನೋಡಲು ತೆರಳಿದ್ದ. ತಾನು ಹೋಗಿದ್ದೆನೆಂದು ಆಧಾರಗಳನ್ನು ಕೊಡಲು ಅವನು ಸಮರ್ಥನಿದ್ದ. ಆದರೂ ಹೃದಯ ಭೀತಿಯಿಂದ ಕಂಪಿಸುತ್ತಿತ್ತು. ಅವದೋ ಅವ್ಯಕ್ತಭಯ ರೋಮ ರೋಮಗಳಲ್ಲಿ ಹರಿಯುತ್ತಿದ್ದಂತೆ ಭಾಸವಾಗುತಿತ್ತವನಿಗೆ. ಅಂದು ರಾತ್ರಿ ಸುಮಾರು ೧೦ ಗಂಟೆಗೆ ಪಿಕ್ಚರದಿಂದ ಮನೆಗೆ ಮರಳಿದ. ತಮ್ಮ ಮನೆಯ ಬಾಗಿಲಲ್ಲಿ ಒಬ್ಬ ಪೋಲೀಸಿನವನೊಬ್ಬ ನಿಂತುಕೊಂಡುದನ್ನು ಕಂಡು ಅವನಿಗೆ ಅಮಿತಾಶ್ಚರ್ಯವಾಗಿತ್ತು. ಹತ್ತಿರ ಬಂದು ಅವನು ಅಲ್ಲಿ ನಿಂತಿರುವ ವಿಚಾರವನ್ನು ಕೇಳಿದ. ಅವನಿಂದಲೇ ತನ್ನ ತಂದೆಯ ಕೊಲೆಯಾದ ವಿಷಯ ತಿಳಿದು ಬೆಚ್ಚಿಬಿದ್ದ. ಮಕ್ಕಳಿಗಾಗಿ ಹಂಬಲಿಸಿ ಪಡೆದು ತಾಯಿ ಮುಂದಿನ ಸುಂದರ ಕನಸುಗಳನ್ನು ಹೆಣೆಯುತ್ತಿರುವಾಗ ಮಗು ಸತ್ತ ಸುದ್ದಿಯನ್ನು

ಕೇಳಿದಂತಾಗಿತ್ತು. ಅವನು ಆ ಶೋಚನೀಯ, ನಿಸ್ಸಹಾಯಕ ಪರಿಸ್ಥಿತಿ ಒಳಗೆ ಪ್ರವೇಶಿಸುವ ಸ್ಥಿತಿಯಲ್ಲಿರಲಿಲ್ಲ ಅವನು.

ಅವನು ಅಲ್ಲಿಯೇ ನಿಂತಿರುವಾಗ ಪೋಲೀಸ ವ್ಯಾನೊಂದು ಬಂದು ಅವನ ಮನೆಯ ಮುಂದೆ ನಿಂತಿತು. ಅವರಿಂದ ಎಂಟು ಹತ್ತು ಜನ ಇಳಿದರು. ಅವರೊಡನೆ ಇನ್ಸಪೆಕ್ಟರ ಶ್ರೀಧರ ಸಹ ಇಳಿದುಬಂದ. ಅವನಿಗೆ ನಾರಾಯಣನ ಪರಿಚಯವಿರಲಿಲ್ಲವಾದರೂ ಅವನ ವೇಷ ಭೂಷಣಗಳಿಂದ ಅವನು ಅಶ್ವತ್ಥರಾಯರ ಮಕ್ಕಳಲ್ಲಿಯ ಒಬ್ಬನಾಗಿರಬೇಕೆಂದು ಗ್ರಹಿಸಿದ. ನಾರಾಯಣನೊಡನೆ ಮಾತನಾಡಿ ಪೋಲೀಸ ಶ್ರೀಧರನಿಗೆ ಅವನ ಪರಿಚಯ ಮಾಡಿಕೊಟ್ಟ. ಅವನನ್ನು ಕರೆದುಕೊಂಡು ಶ್ರೀಧರ ಮನೆಯನ್ನು ಪ್ರವೇಶಿಸಿದ. ಫಿಂಗರ ಪ್ರಿಂಟ ಪ್ರವೀಣರು, ಸರಕಾರಿ ಫೋಟೊಗ್ರಾಫರರು ಮೆಟ್ಟಲುಗಳನ್ನೇರಿ ಮೆಟ್ಟಲುಗಳನ್ನೇರಿ ಮೇಲ್ಭಾಗವನ್ನು ತಲುಪಿದರು. ನಾರಾಯಣನ ಮೊಗ ಒಳಗಿನ ಸನ್ನಿವೇಶವನ್ನು ನೋಡಿ ವಿವರ್ಣವಾಯಿತು. ಹೃದಯ ತುಂಬಿಬಂದು ಕಣ್ಣು ಮಂಜಾಗಿ ಮುಂದಿನ ದೃಶ್ಯ ಕಾಣದಂತಾಯಿತು.

ಕೊಲೆ! ನಿರ್ದಯತನದಿಂದ ಮಾಡಿದ ಕಗ್ಗೊಲೆ! ರಕ್ತವೆಲ್ಲ ಹರಿದು ಅಲ್ಲಲ್ಲಿ ಒಣಗಿತ್ತು. ಕೋಣೆಯ ಸಾಮಾನುಗಳೆಲ್ಲ ಅವ್ಯವಸ್ಥಿತವಾಗಿ ಚೆಲ್ಲಾಪಿಲ್ಲಿಯಾಗಿದ್ದವು. ಕುರ್ಚಿ, ಮೇಜುಗಳೆಲ್ಲ ತಮ್ಮ ಸ್ಥಳವನ್ನು ಬಿಟ್ಟು ಅತ್ತಿತ್ತ ಚಲಿಸಿದ್ದವು. ಸಾಯುವಾಗ ಮುದುಕ ಬಹುಶಃ ಪ್ರತಿಭಟನೆಯನ್ನು ಮಾಡಿರಬಹುದು. ಒಳಗಿನ ಕಿಟಕಿಯ ಬಾಗಿಲುಗಳೆಲ್ಲ ಮುಚ್ಚಲ್ಪಟ್ಟು ಕೊಂಡಿಯನ್ನು ಹಾಕಿತ್ತು. ಅಶ್ವತ್ಥರಾಯರ ದೇಹ ಆಂಗ್ಲ ರೀತಿಯ ಒಲೆಯ ಎದುರಿಗೆ ಬಿದ್ದಿತ್ತು. ಶ್ರೀಧರ ಆ ಒಲೆಯ ಹತ್ತಿರ ಹೋಗಿ ನೋಡಿದ. ಕೆಂಡಗಳು ಉರಿದು ಬೂದಿಯಾಗಿದ್ದವು. ಆದರೆ ಒಲೆಯಿಂದ ತುಸು ಬೆಚ್ಚಗಾದ ಹವೆ ಹೊರಬರುತ್ತಿತ್ತು. ಎಲ್ಲ ಸ್ಥಳಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಲಾಯಿತು. ಆದರೆ ಎಲ್ಲಿಯೂ ಆಯುಧ ಮಾತ್ರ ದೊರೆಯಲಿಲ್ಲ. ಅತ್ಯಂತ ಚತುರತೆಯಿಂದ ಎಲ್ಲ ಅನುಮಾನಗಳನ್ನು ನಾಶ ಮಾಡಲಾಗಿತ್ತು. ಎಲ್ಲಿಯೂ ಕೈ ಬೆರಳುಗಳುಗಳು ಕಂಡುಬರಲಿಲ್ಲ. ಅಶ್ವತ ರಾಯರು ಕಲಾಪ್ರಿಯರೆಂದು ಅಲ್ಲಲ್ಲಿ ಟೇಬಲ್ಲಿನಮೇಲೆ ಇದ್ದಂಥ ಹಸ್ತಿದಂತದ ಮೂರ್ತಿಗಳು ಹೇಳುತ್ತಿದ್ದವು. ಯಾವ ಕುರುಹುಗಳನ್ನು ಕಾಣದ ಜೊಸೆಫರಿಗೆ ನಿರಾಶೆಯಾದಂತಾಗಿತು. ಶ್ರೀಧರ ಮಾತ್ರ ಅತ್ತಿತ್ತ

ತನ್ನ ಸೂಕ್ಷ್ಮ ದೃಷ್ಟಿಯನ್ನು ಬೀರುತ್ತಲೇ ಇದ್ದ. ಬೇಗನೆ ನಿರಾಶೆಯನ್ನು ತಾಳುವ ಸ್ವಭಾವದ ಅವನದಲ್ಲ. ಕೊಲೆಗಾರ ಎಷ್ಟೇ ಚತುರನಾದರೂ ಅವನಿಂದ ಅವನಿಗರಿಯದಂತೆಯೆ ಅನುಚಿತ ಕಾರ್ಯಗಳು ಸಂಭವಿಸಿಯೇ ತೀರುತ್ತವೆ ಎಂಬದರಲ್ಲಿ ದೃಢವಿಶ್ವಾಸವವನಿಗೆ. ಕಿಟಕಿಯ ಬಾಗಿಲುಗಳನ್ನು ಪರೀಕ್ಷಿಸಿದ ಎಲ್ಲ ಡ್ರಾ, ಕಪಾಟುಗಳನ್ನು ಹಸ್ತಿದಂತವ ಮೂರ್ತಿಗಳನ್ನು ಕೈಬೆರಳಿನ ಗುರುತುಗಳಿಗಾಗಿ ಪರೀಕ್ಷಿಸಲಾಯಿತು. ಬಾಗಿಲಿನ ಗುಂಟೆ ರಕ್ತದ ಕಲೆಗಳೇನಾದರೂ ಬಿದ್ದಿರುವವೇನೋ ಎಂದು ನೋಡಲಾಯಿತು. ತಲೆಬಾಗಿಲು ತೆರೆದಿದ್ದರಿಂದ ಅಲ್ಲಿಂದಲೇ ಅನಾಮಧೇಯ ಕೊಲೆಗಾರನು ಬಂದು ಹತ್ಯಗೈದಿರಬೇಕೆಂದು ತರ್ಕಿಸಲಾಯಿತು. ಆ ಎದುರಿನ ಬಾಗಿಲಿನಿಂದ ಬಂದ ಅವನಿಗೆ ಯಾವ ಮತ್ತು ಯಾರ ಪ್ರತಿರೋಧವಿಲ್ಲವೆಂದು ಕಾಣುತ್ತದೆ. ಈ ಮನೆಯನ್ನು ಅವನು ಚೆನ್ನಾಗಿ ಅರಿತವನಿರಬೇಕು. ಅವನು ಯಾರೂ ಇರದ ಹೊತ್ತಿನಲ್ಲಿ ಬಂದು ಸುಲಭವಾಗಿ ಕೊಲೆ ಮಾಡಿ ಹೋಗಿದ್ದಾನೆ.

ಸರಕಾರಿ ಡಾಕ್ಟರ ಕೈಯಲ್ಲಿ ಲೆದರ ಬ್ಯಾಗ ಹಿಡಿದುಕೊಂಡು ಒಳಗೆ ಬಂದು ಹೆಣದ ಹತ್ತಿರ ಕುಳಿತು ಅದನ್ನು ಪರೀಕ್ಷಿಸಿದ ಶ್ರೀಧರ ಕುತೂಹಲದಿಂದ ಅವನ ಮೋರೆಯನ್ನು ನೋಡಿದ, ಕುತೂಹಲ ಬೆರೆತ ಧ್ವನಿಯಿಂದ ಶ್ರೀಧರ ಕೇಳಿದ.

"ಅಶ್ವತ್ಥರಾಯರ ಕೊಲೆಯಾಗಿ ಸುಮಾರು ಎಷ್ಟು ಗಂಟೆಯಾಗಿರಬಹುದು?''

ಡಾಕ್ಟರರ ದೃಷ್ಟಿ ಅವರ ವಾಚಿನ ಕಡೆಗೆ ತೆರಳಿತು. ಆ ಮೇಲೆ ಶ್ರೀಧರನೆಡೆಗೆ ನೋಡುತ್ತಾ, ಸುಮಾರು ಈಗ ೧೧ ಗಂಟೆಯಾಗಿದೆ. ಕೊಲೆಯಾಗಿ ಎರಡುವರೆ ತಾಸು ಕಳೆದಿದೆ. ಅದರೆ ಎಂಟುವರೆಯ ಮೇಲೆಯೆ ಈ ಕೊಲೆಯನ್ನು ಮಾಡಿದ್ದಾರೆ.

"ಎಂಟುವರೆ ಗಂಟೆಯಾದಮೇಲೆಯೇ" ಶ್ರೀಧರ ತನ್ನಷ್ಟಕ್ಕೆ ತಾನೆ ಪುಟಪುಟಿಸಿದ. ಜೋಸೆಫರು ಅಲ್ಲಿಯೇ ಒಂದು ಕೋಚಿನಮೇಲೆ ವಿಚಾರ ಮುಖ ಮುದ್ರೆಯನ್ನು ತೋರುತ್ತ ಆಸೀನರಾಗಿದ್ದರು. ವಿಷಯ ಜಟಿಲವಾದುದೆಂದು ಅನುಭವಸ್ಥರಾದ ಅವರಿಗೆ ಮನದಟ್ಟಾಗಿತ್ತು. ಅನೇಕ

ಕೋನಗಳಿಂದ ಫೋಟೋ ತೆಗೆಯಲಾಯಿತು. ಶ್ರೀಧರ ಪ್ರೇತವನ್ನು ಪೋಸ್ಟ ಮಾರ್ಟಂಗಾಗಿ ಕಳುಹಿ ತಾನು ಸಬ್ ಇನ್ಸಪೆಕ್ಟರ ಜೋಸೆಫರು ಕುಳಿತುಕೊಂಡಿದ್ದ ಕೋಚಿನಮೇಲೆ ಕುಳಿತುಕೊಂಡ ನಾರಾಯಣನಿಗೆ ಒಳಗಿನ ಅಸಹ್ಯವಾದ ವಾತಾವರಣವನ್ನು ನಿರುಕಿಸುವ ಸಾಮರ್ಥ್ಯವಿರಲಿಲ್ಲವಲ್ಲದೆ ಗಂಟಲು ಬಿಗಿದು ತಾನೀಗ ಯಾವದೋ ನಿರ್ಜನಾರಣ್ಯದಲ್ಲಿ, ಜನನಿಬಿಡವಾದ ನಗರವನ್ನು ತ್ಯಜಿಸಿ ಒಂಟಿಯಾಗಿ ಬಾಳಬೇಕಾಗಿದೆಯೆಂಬ ಭಾವನೆ ಬೆಟ್ಟುಬಿಡದೆ ಬೆನ್ನುಹತ್ತುತ್ತಿತ್ತು. ತಲೆ ಸಿಡಿಯುತ್ತಿತ್ತು. ಅಸಹ್ಯ ವೇದನೆಯಿಂದ ಮೆದುಳಿಗೆ ಉರಿಯನ್ನು ತಾಕಿಸಿದಂತಿತ್ತು. ಬಾಹ್ಯಪ್ರಜ್ಞೆ ತಪ್ಪಿ ಹಿಂದಿನ ಹಲವು ನೆನವುಗಳ ಮಧ್ಯೆ ತೇಲಾಡುತ್ತಿದ್ದ. ಒಳಗೆ ಕುಳಿತುಕೊಂಡಿದ್ದ ಅಧಿಕಾರಿಗಳಲ್ಲಿ ಮೌನ ತಾನೇ ತಾನಾಗಿ ಬಲೆಯನ್ನು ಹೆಣೆದಿತ್ತು. ಜೋಸೆಫರಿಗೆ ಇದು ಸಹ್ಯವಾಗಲಿಲ್ಲ.

"ಸರ್ ನಿಮಗೇನಾದರೂ ಸುಳಿವು ತಿಳಿದು ಬಂದಿತೆ?''

"ಆಂ'' ಎಂದು ಶ್ರೀಧರ ಮೆಟ್ಟಿಬಿದ್ದ. ದೀರ್ಘವಾದ ಯಾವುದೋ ಆಲೋಚನೆಯಲ್ಲಿ ತೊಡಗಿದ ಶ್ರೀಧರ ಒಮ್ಮೆಲೇ ತನ್ನ ಯೋಚನೆಯ ಕೊಂಡಿ ಕಳಚಿ ಬಿದ್ದುದನ್ನು ಕಂಡು—

"ಇಲ್ಲ, ಇಲ್ಲ ಅಂಥ ಸೂಕ್ಷ್ಮ ಸುಳಿವುಗಳೇನು ತಿಳಿದುಬರಲಿಲ್ಲ" ಎಂದು ನುಡಿದು ಸುಮ್ಮನಾದ.

"ಈ ಮನೆಯಲ್ಲಿ ಆಪ್ತರಾರೋ ಇವರನ್ನು ಕೊಲೆ ಮಾಡಿದಂತಿದೆ.''

"ಹಾಗೆಂದು ನಿಶ್ಚಿತವಾಗಿ ಹೇಳಲು ಬರುವದಿಲ್ಲ ಜೋಸೆಫರೆ. ಈ ಮುದುಕನ ಜೀವ ಎಷ್ಟು ರಹಸ್ಯಗಳಿಂದ ಕೂಡಿತ್ತೊ ಏನೋ? ಮೊದಲು ಇವನ ಜೀವನದ ಸಂಪೂರ್ಣ ಘಟನೆಗಳ ಪರಿಚಯವಾಗಬೇಕು. ತದನಂತರ ಇವನ ಮಿತ್ರರಾರು, ಶತ್ರುಗಳಾರು ಎಂಬುದು ತಿಳಿದುಬರಬೇಕು. ಆ ಮೇಲೆ ಶೋಧನೆ ಕಾರ್ಯ ಆರಂಭವಾಗುವದು. ಅದಿರಲಿ ಈ ಊರಿನಲ್ಲಿ ಅಶ್ವತ್ಥರಾಯ ವಾಸಿಸಲು ಪ್ರಾರಂಭಿಸಿ ಎಷ್ಟು ದಿನಗಳಾದವು?"

ಸುಮಾರು ೧೫-೨೦ ವರ್ಷಗಳಿಂದ ಈತ ಇಲ್ಲಿಯೇ ಮನೆಯನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದಾನೆ. ಬಹಳ ಶ್ರೀಮಂತನೆಂದು ಕಾಣುತ್ತಾನೆ."

ಯಾವ ವ್ಯವಹಾರದಿಂದ ಇಷ್ಟು ನಿಧಿ ಸಂಗ್ರಹವಾಗಿದೆ?'' ಶ್ರೀಧರ ಕೇಳಿದ.

ಅದೇನು ಅಷ್ಟು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಯಾವದೊ ಭಂಗಾರದ ವ್ಯವಹಾರದಲ್ಲಿ ಲಕ್ಷಗಟ್ಟಲೆ ಸಂಪಾದನೆ ಮಾಡಿದನೆನ್ನುತ್ತಾನೆ. ಯಾರನ್ನೊ ಮುಳುಗಿಸಿ ಈ ಐಶ್ವರ್ಯದ ಅಧಿಪತಿಯಾಗಿದ್ದಾನೆಂದು ಹೇಳುತ್ತಾರೆ. ಒಟ್ಟಿನ ಮೇಲೆ ಹೇಳುವದಾದರೆ ಮುದುಕ ಸಭ್ಯನಿರಲಿಲ್ಲ.

"ಇವನ ಪೂರ್ವ ಪ್ರಕರಣಗಳೇನಾದರೂ ನಮ್ಮ ಇವೆಯೇ?"

"ಹಳೆಯ ಪ್ರಕರಣಗಳೇನೂ ಇಲ್ಲ. ಇವನ ವ್ಯವಹಾರವೆಲ್ಲ ಬಹಳ ರಹಸ್ಯವಾಗಿ ಸಾಗುತ್ತಿತು. ಮುದುಕ ತಾರುಣ್ಯದಲ್ಲಿದ್ದಾಗ ಮಾಡಬಾರದ ಕೃತ್ಯಗಳನ್ನೆಸಗಿದ್ದನಂತೆ. ಇವನಿಗೆ ಒಟ್ಟು ಮೂರು ಜನ ಹೆಂಡಂದಿರು ಆದರೆ ಅವರಲ್ಲಿ ಯಾರೂ ಜೀವಂತರಾಗಿ ಉಳಿದಿಲ್ಲ. ಈ ಮುದುಕ ವಿದುರನಾಗಿದ್ದ. ಇವನಿಗೆ ಒಟ್ಟು ಐದು ಜನ ಮಕ್ಕಳು ಆದರಲ್ಲಿ ಒಬ್ಬಳು ಮಗಳು."

"ಈಗ ಬಂದಿದ್ದನಲ್ಲ ಆವನೂ ಒಬ್ಬ ಮಗನೆಂದು ಕಾಣುತ್ತದೆ. ಸ್ವಲ್ಪ ರಸಿಕನಾಗಿಯೇ ಕಾಣುತ್ತಾನೆ. ವ್ಯಕ್ತಿ ಅಲ್ಲವೇ ಜೋಸೆಫ."

"ಊಟ ಮಾಡಲು ಮೃಷ್ಟಾನ್ನ, ಉಡಲು ಶಿಲ್ಕಿನ ಬಟ್ಟೆ, ಖರ್ಚು ಮಾಡಲು ಸಮೃದ್ಧ ಹಣವಿರುವಾಗ ಯಾವ ಸನ್ಯಾಸಿ ತಾನೆ ಸಂಸಾರಿಯಾಗಲಾರ. ಸರ್ ಅದರಲ್ಲೂ ನಮ್ಮಂಥವರ ಪಾಡೇನು?" ಜೋಸೆಫರು ನಗುತ್ತ ತಮ್ಮ ಅನುಭವದಾಳದಿಂದ ಒಂದು ತತ್ವಜ್ಞಾನದ ಬಾಣವನ್ನೆಸೆದರು. ಅವರೆ ಮುಂದುವರಿಯುತ್ತ "ಈ ಕೊಲೆ ಮಾಡಿದಾತ ಬಲಶಾಲಿ ಇರಬೇಕಲ್ಲವೇ?"

"ನೀವನ್ನುವದು ನಿಜ. ಅಶ್ವತ್ಥರಾಯ ಸಹ ದುರ್ಬಲನಾದ ವ್ಯಕ್ತಿಯೇನೂ ಅಲ್ಲ. ಅವನನ್ನು ಕೊಲ್ಲಲು ಸ್ವಲ್ಪ ಬಲಿಷ್ಠನಾದ ವ್ಯಕ್ತಿಯೇ ಬೇಕು. ಈ ಮನೆಯ ಕಾವಲಿಗೆ ಪೋಲೀಸರನ್ನು ನಿಯಮಿಸಿರಿ. ವೇಳೆಯನ್ನು ನೋಡುತ್ತಾ ಈಗಾಗಲೇ ಸುಮಾರು ೧೨ ಗಂಟೆಯಾಗುತ್ತ ಬಂದಿದೆ. ನಾಳೆ ಆ ನಾರಾಯಣನನ್ನು ಕರೆಸಿರಿ. ರಾತ್ರಿ ಅವನೆಲ್ಲಿದ್ದ, ಅವನ ತಂದೆಯ ಮತ್ತು ಅಣ್ಣತಮ್ಮಂದಿರ ವಿಷಯವಾಗಿ ಏನಾದರೂ ಹೊಸ ವಿಷಯ ತಿಳಿದು ಬರಬಹುದು."

"ಆ ರೀತಿಯಾಗಿಯೆ ವ್ಯವಸ್ಥೆ ಮಾಡುವೆನು"ಎನ್ನುತ್ತ ಜೋಸೆಫರು ತಮ್ಮ ಆಜ್ಞೆಯನ್ನು ಕಾರ್ಯಕಾರಿ ಮಾಡಲು ಎದ್ದು ನಿಂತರು. ನಾರಾ

ಯಣನಿಗೀಗ ಬಾಹ್ಯ ಪ್ರಜ್ಞೆ ಬಂದಿತ್ತು. ನಾಳೆಯ ವಿಚಾರಣೆಗೆ ತಾನು ಸಿದ್ಧನಿರಬೇಕೆಂಬ ವಿಷಯ ಅವನಿಗೆ ತಿಳಿಯಿತು. ಪೋಲೀಸಿನವರ ವಿಷಯವಾಗಿ ಯಾವದೋ ಭೀತಿ ಅವನ ಮೆದುಳನ್ನು ಕೊರೆಯುತ್ತಿತ್ತು. ಭಯದ ಹಾಲಾಹಲ ನರನರಗಳಲ್ಲಿ ಪಸರಿಸಿ, ಎದೆ ಹಾರುತ್ತಿತ್ತು.

ಮರುದಿನ ನಾರಾಯಣ ಪೋಲೀಸ ಸ್ಟೇಶನ್ನಿನಲ್ಲಿ ಹಾಜರಾಗಿದ್ದ. ಇನ್ಸಪೆಕ್ಟರರು ಇನ್ನು ಬಂದಿಲ್ಲವಾದ್ದರಿಂದ ಭಯಮಿಶ್ರಿತ ಉತ್ಸುಕತೆಯ ಮನದಿಂದ ಕುಳಿತುಕೊಂಡಿದ್ದ. ೫-೧೦ ನಿಮಿಷಗಳು ಕಳೆದಮೇಲೆ ಇನ್ಸಪೆಕ್ಟರ ಶ್ರೀಧರ ಆಗಮಿಸಿದ. ಅವನನ್ನು ಕಂಡು ನಾರಾಯಣ ಎದ್ದು ನಿಂತು ನಮಸ್ಕರಿಸಿದ. ''ಕೂಡಿ, ಕೂಡಿ ಪರವಾಗಿಲ್ಲವೆನ್ನುತ್ತ ಶ್ರೀಧರ ಕುಳಿತುಕೊಂಡ. ಮೇಜಿನ ಮೇಲಿನ ಕಾಗದ ಪತ್ರಗಳನ್ನೊಮ್ಮೆ ನೋಡಿದ. ನಾರಾಯಣನನ್ನೊಮ್ಮೆ ಓರೆಗಣ್ಣಿನಿಂದ ಈಕ್ಷಿಸಿದ. ನಾರಾಯಣ ಸ್ವಲ್ಪ ತೆಳ್ಳಗಾದ ವ್ಯಕ್ತಿ. ೩೦-೩೫ ವಯಸ್ಸಾಗಿದ್ದವೆಂದು ಕಾಣುತ್ತದೆ ಶಿಲ್ಕ ಶರಟು, ಆಧುನಿಕ ರೀತಿಯ ಕ್ರಾಪು ತಲೆಯ ಮೇಲೆ, ಕಣ್ಣು ಶಾಂತವಾಗಿದ್ದವು. ನೋಡುವವರಿಗೆ ಮೃದು ವ್ಯಕ್ತಿಯೆಂದು ಕಾಣುತ್ತಿದ್ದ. ಶ್ರೀಧರ ತನ್ನ ನಿರೀಕ್ಷಣೆಯನ್ನು ಮುಗಿಸಿ,

''ನಿಮ್ಮ ಹೆಸರು ನಾರಾಯಣಲ್ಲವೇ?"

ಶ್ರೀಧರ ಕೇಳಿದ ರೀತಿಯನ್ನು ನೋಡಿ ಜೋಸೆಫರು ಕಣ್ಣರಳಿಸಿ ಅವನನ್ನೊಮ್ಮೆ ನೋಡಿದರು.

''ಹೌದು, ಸರ್ ನನ್ನ ಹೆಸರು ನಾರಾಯಣ"

''ನಿಮ್ಮ ತಂದೆಯವರಿಗೆ ನೀವೇ ಹಿರಿಯ ಮಕ್ಕಳೋ ಅಥವಾ ನಿಮ್ಮ ಅಣ್ಣಂದಿರಿದ್ದಾರೆಯೋ?''

''ನಾನೆ ಅವರ ಹಿರಿಯ ಮಗ.''

''ನಿಮ್ಮ ಉಳಿದ ತಮ್ಮಂದಿರೆಲ್ಲಿದ್ದಾರೆ ?"

''ನನ್ನ ಕಿರಿಯ ತಮ್ಮ ಶೇಖರ. ನನ್ನೊಂದಿಗೆ ಇರುತ್ತಾನೆ. ಉಳಿದಿಬ್ಬರು ತಮ್ಮಂದಿರಲ್ಲಿ ಒಬ್ಬ ಸುರೇಷ ದಿಲ್ಲಿಯಲ್ಲಿದ್ದಾನೆ. ಇನ್ನೊಬ್ಬ ಮಾಧವ ಮದ್ರಾಸಿನಲ್ಲಿದ್ದಾನೆ.''

''ನಿಮ್ಮ ತಂಗಿ ........"

''ಹೌದು, ಈಗ ಅವಳಿಲ್ಲಿ ಇಲ್ಲ. ಸಿಲೋನಿನಲ್ಲಿದ್ದಾಳೆ. "

''ನಿಮ್ಮ ತಂಗಿ ಏನಾದರೂ ಇಲ್ಲಿಗೆ ಬರುತ್ತಿದ್ದರೆ ಅಥವಾ ನಿಮ್ಮ ತಂದೆಯವರೇ ಅಲ್ಲಿಗೆ ಹೋಗುತ್ತಿದ್ದರೋ?''

''ನಮ್ಮ ತಂದೆ ಆಗಾಗ ಅಲ್ಲಿಗೆ ಹೋಗುತ್ತಿದ್ದರು. ಆದರೆ........ ನಾರಾಯಣ ತಡೆದು ಮತ್ತೆ ಮುಂದುವರೆದು ''ತಮ್ಮ ಮಗಳು ತಮಗೆ ವಿರುದ್ಧವಾಗಿ ನಡೆದುಕೊಂಡುದನ್ನು ಕಂಡು ಅವರು ಅಲ್ಲಿಗೆ ಹೋಗುವದನ್ನು ಬಿಟ್ಟುಬಿಟ್ಟರು.' ಎಂದು ವಿವರಿಸಿದ.

''ನಿಮ್ಮ ತಂಗಿಗೆ ಮಕ್ಕಳೇನಾದರೂ ಇದ್ದಾರೋ?''

''ಒಬ್ಬ ಮಗಳು ಮಾತ್ರ ಇದ್ದಾಳೆ. ಅವಳೆ ಹಿಂದೆ ಇಲ್ಲಿಗೆ ಬರುತ್ತಿದ್ದಳು. ಈಗೀಗ ಅವರ ವಿಷಯವಾಗಿ ಯಾವ ಸಂಗತಿಯು ತಿಳಿದಿಲ್ಲ."

''ನಿಮ್ಮ ತಂದೆಯವರು ತಮ್ಮ ವಿರುದ್ಧವಾಗಿ ಯಾವದನ್ನು ನಡೆಯಗೊಡುತ್ತಿರಲಿಲ್ಲವೆಂದು ಕಾಣುತ್ತದೆ.''

''ಹೌದು ಅವರಿಗೆ ಪ್ರತಿಯಾಗಿ ಹೇಳಲು ಯಾರಿಗೂ ಧೈರ್ಯವಿರಲಿಲ್ಲ'' ತಂದೆ ಮಗಳ ನಡುವೆ ಜಗಳವಾಗುವ ಮೊದಲು ಅವರು ತಮ್ಮ ಮಗಳನ್ನು ಬಹಳ ಪ್ರೀತಿಸುತ್ತಿದ್ದರು. ಆದರೆ ತಮ್ಮ ಆಜ್ಞೆ ಭಂಗವಾದುದು ಅವರಿಗೆ ಸಹನವಾಗಲಿಲ್ಲ.

''ನಿಮ್ಮ ತಮ್ಮಂದಿರೆಲ್ಲ ಏನು ಕೆಲಸ ಮಾಡುತ್ತಿದ್ದಾರೆ? ಅವರೇನಾದರೂ ಇಲ್ಲಿಗೆ ಬರುತ್ತಿರುತ್ತಾರೆಯೇ?"

''ದಿಲ್ಲಿಯಲ್ಲಿರುವ ಸುರೇಶ ಇನ್ಶೂರನ್ಸ ಕಂಪನಿಯಲ್ಲಿದ್ದಾನೆ. ಮದ್ರಾಸಿನಲ್ಲಿರುವ ಮಾಧವ ತನ್ನ ಮಾವನ ಮೋಟಾರ ಕಂಪನಿಯಲ್ಲಿ ಸಹಾಯ ಮಾಡುತ್ತಿದ್ದಾನೆ. ಶೇಖರ ಇಲ್ಲಿಯೇ ಇದ್ದಾನೆ. ಅವರಿಬ್ಬರೂ ಇಲ್ಲಿಗೆ ಬರುವದಿಲ್ಲ. ಕಾರಣ...........ನಾರಾಯಣ ಮೌನ ತಾಳಿದ.''

''ಪರವಾಗಿಲ್ಲ ಹೇಳಿ ಮಿ. ನಾರಾಯಣ ನಿಮಗೆ ತಿಳಿದಿರುವದನ್ನೆಲ್ಲ ವಿವರವಾಗಿ ತಿಳಿಸಿ ಅದರಿಂದ ನಮಗೆ ಸಹಾಯವಾಗಬಹುದು.' ಜೋಸೆಫರು ಅವನ ಮೌನವನ್ನು ಮುರಿಯಲು ನಡುವೆಯೆ ಮಾತನಾಡಿದರು. ಶ್ರೀಧರ ಅದು ಸರಿಯೆಂಬಂತೆ ಅವನ ಮುಖವನ್ನು ನೋಡಿದ.

ನಾರಾಯಣ ನಿರ್ವಾಹವಿಲ್ಲದೆ ಉಗುಳು ನುಂಗುತ್ತ ನುಡಿದ—

"ನಮ್ಮ ತಂದೆಯವರ ಆಚರಣೆ ಚನ್ನಾಗಿರಲಿಲ್ಲ. ನನ್ನ ಉಳಿದಿಬ್ಬರು ತಮ್ಮಂದಿರಿಗೆ ಅವರ ಸರ್ವಾಧಿಕಾರ ಒಪ್ಪಿಗೆಯಾಗಲಿಲ್ಲ. ಆದ್ದರಿಂದ ಅವರು ಬೇರೆಯಾಗಿ ಹೊರಟುಹೋದರು. ಅನೇಕ ವರುಷಗಳಾದರೂ ಅವರಿತ್ತ ಕಡೆ ಬಂದಿಲ್ಲ.

''ಅಂದರೆ ನಿಮ್ಮ ತಂದೆಯವರ ಆಸ್ತಿಯಲ್ಲಿ ಯಾವ ಪಾಲಿಲ್ಲವೆಂದು ಕಾಣುತ್ತದೆ.''

''ಅದೇನನ್ನು ನಾನು ನಿಶ್ಚಿತವಾಗಿ ಹೇಳಲಾರೆ.''

ಒಂದೆರಡು ನಿಮಿಷಗಳವರೆಗೆ ನಿಸ್ತಬ್ಧತೆ ಆ ಸ್ಥಳವನ್ನು ವ್ಯಾಪಿಸಿತು.

''ನಿನ್ನೆ ಸಂಜೆ ನೀವು ಎಲ್ಲಿದ್ದಿರಿ? ಏನು ಮಾಡುತ್ತಿದ್ದಿರೆಂಬುದನ್ನು ವಿವರವಾಗಿ ಹೇಳಬಹುದೇ?"

ಶ್ರೀಧರನ ಈ ಏಕಾ ಏಕಿ ಪ್ರಶ್ನೆಗೆ ನಾರಾಯಣ ಬೆಚ್ಚಿಬಿದ್ದ. ಭೀತಿಯ ಛಾಯೆಯೊಮ್ಮೆ ಪಸರಿಸಿ ಮಾಯವಾಯಿತು.

''ನಿನ್ನೆ ಸಂಜೆ ಸುಮಾರು ೬-೩೦ ಗಂಟೆಗೆ ನಾನು ಮನೆಯನ್ನು ತ್ಯಜಿಸಿದೆ. ಅಲ್ಲಿಂದ ನೇರವಾಗಿ ಥೇಟರಿಗೆ ತೆರಳಿದೆ.''

''ಮಿ. ನಾರಾಯಣ ನೀವು ಮನೆಯನ್ನು ತ್ಯಜಿಸಿದಾಗ ನಿಮ್ಮ ತಂದೆಯವರು ಏನು ಮಾಡುತ್ತಿದ್ದರು? ಅಂದು ಯಾರಾದರೂ ನಿಮ್ಮ ತಂದೆಯವರೊಡನೆ ಭೆಟ್ಟಿಯಾಗಲು ಬಂದಿದ್ದರೇನು?

''ನಾನು ಮನೆಯನ್ನು ತ್ಯಜಿಸಿದಾಗ ನಮ್ಮ ತಂದೆಯವರು ತಮ್ಮ ರೂಮಿನಲ್ಲಿದ್ದರು. ಅಂದು ಅವರನ್ನು ಭೆಟ್ಟಿಯಾಗಲು ಯಾರೂ ಬರುತ್ತಿರಲಿಲ್ಲ. ಅವರದು ಬಹಳ ವಿಚಿತ್ರ ಸ್ವಭಾವ."

''ಸಾಯಂಕಾಲ ನೀವು ಹೋಗುವ ಮೊದಲು ನಿಮಗೇನಾದರೂ ಹೇಳಿದರೇ ನಿಮ್ಮ ತಂದೆಯವರು? ಅವರು ಯಾರನ್ನಾದರೂ ನಿರೀಕ್ಷಿಸುತ್ತಿದ್ದರೇನು?''

''ಅವರು ಅಂದು ಯಾರನ್ನು ನಿರೀಕ್ಷಿಸುತ್ತಿರಲಿಲ್ಲ. ಆದರೆ ಅವರು ಬಹಳ ಉದ್ವೇಗಾವಸ್ಥೆಯಲ್ಲಿದ್ದರು. ಅಂದು ಯಾರನ್ನು ಕಂಡರೂ ಸಿಡಿಮಿಡಿಗುಟ್ಟುತ್ತಿದ್ದರು. ನಾನು ಹೊರಡುವ ಮೊದಲು ಅವರು ತಮ್ಮ ರೂಮಿನಲ್ಲಿ ಶತಪಥ ತಿರುಗುತ್ತಿದ್ದರು. ಅವರು ಒಮ್ಮೆ ತಮ್ಮ ರೂಮನ್ನು ಸೇರಿದರೆ ಮರುದಿನವೇ ಕೆಳಗೆ ಇಳಿಯುತ್ತಿದ್ದರು.''

"ಕೊಲೆಯಾದ ದಿನ ಮನೆಯಲ್ಲಿ ಯಾವ ಆಳುಗಳಿರಲಿಲ್ಲವೇ?ಒಟ್ಟು ಎಷ್ಟು ಜನ ನಿಮ್ಮ ಸೇವಕರು?"

"ನಾನು ಹೋಗುವ ಮೊದಲು ಮನೆಯಲ್ಲಿ ಯಾರೂ ಇರಲಿಲ್ಲ. ಸೇವಕರಾರೂ ಇರಲಿಲ್ಲ. ನರಸಮ್ಮ ಎಂಬ ಅಡುಗೆಯವಳಿದ್ದಾಳೆ. ಅವಳು ಸುಮಾರು ಎಂಟು ಗಂಟೆಗೆ ಮನೆಯನ್ನು ಬಿಟ್ಟು ತೆರಳುತ್ತಾಳೆ. ಆದರೆ ಅಂದು ಅವಳು ೬ ಗಂಟೆಗೇನೆ ಹೊರಟು ಹೋಗಿದ್ದಳು. ಮಾದಪ್ಪನೆಂಬ ಆಳಿಗೆ ಮೈಯಲ್ಲಿ ಸರಿಯಾಗಿಲ್ಲವೆಂದು ಎರಡು ದಿನದಿಂದ ಬಂದಿಲ್ಲ. ಇನ್ನೊಬ್ಬ ಆಳು ರಂಗ ತನ್ನ ಬಳಗದವರು ಯಾರೋ ತೀರಿಕೊಂಡರೆಂದು ಹೊಸಪೇಟೆಗೆ ಹೋಗಿದ್ದಾನೆ. ನನ್ನ ತಮ್ಮ ಶೇಖರನಂತು ಸುಮಾರು ನಾಲ್ಕು ದಿನಗಳ ಹಿಂದೆಯೆ ಮುಂಬಯಿಗೆ ಹೊರಟು ಹೋಗಿದ್ದಾನೆ."

"ನಿಮ್ಮ ತಂದೆಯವರು ಹಣವನ್ನೇನಾದರೂ ತಮ್ಮ ಸಂಗಡ ಇಟ್ಟು ಕೊಂಡಿರುತ್ತಿದ್ದರೇನು?"

"ಕ್ಷಮಿಸಬೇಕು. ಆ ವಿಷಯವಾಗಿ ನನಗೇನೂ ತಿಳಿಯದು."

"ನಿಮ್ಮ ತಂಗಿಯ ಮಗಳು ಇಲ್ಲಿಗೆ ಬರುವ ವಿಷಯ ನಿಮಗೆ ತಿಳಿದಿತ್ತೇನು?"

ನಾರಾಯಣ ಅವನನ್ನೊಮ್ಮೆ ಅಚ್ಚರಿಯಿಂದ ನೋಡಿದ—

"ನಿಜವಾಗಿಯೂ ಆ ವಿಷಯ ತಿಳಿಯದೆನಗೆ. ನೀವ್ಯಾಕೆ ಆ ವಿಷಯವನ್ನೆತ್ತಿದಿರಿ?"

"ಹಾಗಾದರೆ ಆ ವಿಷಯ ನಿಮಗೆ ತಿಳಿದಿರಲಿಲ್ಲವೆನ್ನಿ. ನಿನ್ನೆ ನೀವಿಲ್ಲದಾಗ ಅವಳು ಬಂದಿದ್ದಾಳೆ. ಅದಿರಲಿ ನಿನ್ನೆ ರಾತ್ರಿ ನೀವು ಎಷ್ಟು ಗಂಟೆಗೆ ಮನೆಗೆ ಬಂದಿರಿ?"

"ನಿನ್ನೆ ಸುಮಾರು ಹತ್ತುಗಂಟೆಯಾಗಿತ್ತು. ಆರೂವರೆಗೆ ನಾನು ಮನೆಯನ್ನು ಬಿಟ್ಟು War and Peace ಪಿಕ್ಚರ ನೋಡಲು ತೆರಳಿದ್ದೆ. ನೀವು ಥೇಟರಿನಲ್ಲಿ ಆ ವಿಷಯವಾಗಿ ಶೋಧಮಾಡಬಹುದು. ಮ್ಯಾನೇಜರ ನನಗೆ ಮೊದಲಿನಿಂದಲೂ ಗುರುತು. ತಿರುಗಿ ಮನೆಗೆ ಬರುವಾಗ ಈ ಸಂಗತಿ........

ನಾರಾಯಣನ ಕಂಬನಿದುಂಬಿದ ಕಣ್ಣನ್ನು ನೋಡಿ ಜೋಸೆಫರು—

"ಮಿ. ನಾರಾಯಣ ಧೈರ್ಯತಂದುಕೊಳ್ಳಿರಿ. ನಿಮ್ಮ ತಂದೆಯ

ವರ ಕೊಲೆಯ ವಿಷಯವಾಗಿ ನಮಗೂ ವ್ಯಥೆಯಾಗಿದೆ. ನೀವೆಲ್ಲರೂ ನಮಗೆ ಸರಿಯಾಗಿ ಸಹಾಯ ಮಾಡಿದರೆ ರಹಸ್ಯ ಬೇಗನೆ ಬಯಲಾಗುವದು. ಎಲ್ಲ ನಿಮ್ಮ ಹಾರ್ದಿಕ ಸಕ್ರಿಯ ಸಹಾಯದ ಮೇಲೆ ಅವಲಂಬಿಸಿದೆ" ಎಂದು ಮಾಮೂಲು ಸಹಾನುಭೂತಿಯನ್ನು ತೋರಿದರು. ಅವರ ನರೆತ ಕೂದಲುಗಳು ಇಂಥ ಎಷ್ಟೋ ಸನ್ನಿವೇಶಗಳನ್ನು ಕಂಡು ಹೃದಯ ಬಿರುಸಾಗಿದೆಯೆಂದು ಹೇಳುತ್ತಿದ್ದವು. ಶ್ರೀಧರನ ಮೋರೆ ಯಾವ ನೋವು ನಲಿವುಗಳನ್ನು ತಾಳದ ಸ್ಥಿತ ಪ್ರಜ್ಞನ ಮೊಗದಂತಿತ್ತು. ನಾರಾಯಣ ತನ್ನ ಪರಿಸ್ಥಿತಿ ಸುಧಾರಿಸಿಕೊಂಡು ಕೇಳಿದ.

"ಇನ್ನು ನಾನು ಹೋಗಬಹುದೆ? ಬೇರೇನಾದರೂ ಕೇಳುವದಿದ್ದರೆ ಕೇಳಿರಿ."

"ಈಗ ಸದ್ಯ ಯಾವ ಪ್ರಶ್ನೆಯು ಇಲ್ಲ. ಆದರೆ ಮುಂದೆ ಸನ್ನಿವೇಶಗಳು ಬರಬಹುದು. ಆಗ ನಿಮ್ಮನ್ನು ಮತ್ತೆ ಕರೆಯಿಸಿಕೊಳ್ಳಬೇಕಾಬಹುದು. ಮಿ. ನಾರಾಯಣ ನಿಮಗೆ ಕೊಡುವ ಒಂದೇ ಒಂದು ಸೂಚನೆಯೆಂದರೆ ನಡೆದ ಘಟನೆಗಳನ್ನು ನಿಜವಾಗಿ ಹೇಳಿರಿ. ನೀವಿನ್ನು ಹೋಗಬಹುದು."

ನಾರಾಯಣ ಅಲ್ಲಿಂದ ಹೊರಗೆ ತೆರಳಿದ. ಅವನು ಭೀತನಾಗಿದ್ದುದು ಶ್ರೀಧರನಿಗೆ ತಿಳಿದುಬಂದಿತು.

"ನಿಮ್ಮ ಅಭಿಪ್ರಾಯವೇನು ಇವನ ಬಗ್ಗೆ?" ನಾರಾಯಣ ಹೊರಗೆ ಹೋದುದನ್ನು ನೋಡಿ ಜೋಸೆಫರು ಕೇಳಿದರು.

"ವ್ಯಕ್ತಿ ಸ್ವಲ್ಪ ............ಎಂದು ಶ್ರೀಧರ ನುಡಿಯುತ್ತಿರುವಾಗಲೇ ನಾರಾಯಣ ಸ್ವಲ್ಪ ಆತುರತೆಯಿಂದ ಒಳಗೆ ಪ್ರವೇಶಮಾಡಿದ.

"ನಾನು ನಿಮಗೆ ಒಂದು ಘಟನೆಯನ್ನು ಹೇಳಿಹೋಗಲು ಮರೆತಿದ್ದೆ. ನಾನು ಹೋಗುವ ಪೂರ್ವದಲ್ಲಿ ನಮ್ಮ ತಂದೆಯವರು ಫೋನು ಮಾಡುತ್ತಿದ್ದರು."

ಶ್ರೀಧರ ಅವನ ಮಾತು ಕೇಳಿ ಸ್ವಲ್ಪ ಕುತೂಹಲ ಕೆರಳಿದ ತನ್ನ ಕಣ್ಣುಗಳಿಂದ ಅವನನ್ನು ನೋಡಿದ.

"ಯಾರಿಗೆಂದು ನೀವು ಹೇಳಬಹುದೆ?"

“ಖಚಿತವಾಗಿ ನಾನೇನು ಹೇಳಲಾರೆ. ಆದರೆ ಅದು ನಮ್ಮ ವಕೀಲರಿಗೆಂದು ಕಾಣುತ್ತದೆ. ಕೋರ್ಟು........ಕಾಗದಪತ್ರ........ನಾಳೆ ಇಲ್ಲಿಗೆ ಬನ್ನಿ........ಮುಂತಾದ ಶಬ್ದಗಳು ನನಗೆ ಅಸ್ಫುಟವಾಗಿ ಕೇಳಿಸಿದವು. ಇದರಿಂದ ನಿಮಗೇನಾದರೂ ಸಹಾಯವಾಗಬಹುದೆ?”

“ಓಹೋ, ಇದರಿಂದ ಸಹಾಯವಾಗಬಹುದು ನಿಮ್ಮ ವಕೀಲರು ಯಾರು?”

“ಪ್ರಸನ್ನ ಕುಮಾರರೆಂದು ಅವರ ಹೆಸರು. ಅವರು ನಮ್ಮ ವಕೀಲರಾಗಿ ಬಹಳದಿನಗಳಾದವು.”

“ಮಿ. ನಾರಾಯಣ, ಈ ಘಟನೆಯನ್ನು ಹೇಳಿದ್ದಕ್ಕೆ ಥ್ಯಾಂಕ್ಸ”

ಜೋಸೆಫರು ಈ ಘಟನೆಯಿಂದ ಶ್ರೀಧರನಿಗೆ ಯಾವ ಅಂಶ ತಿಳಿಯಿತೆಂಬ ಪ್ರಶ್ನಾರ್ಥಕ ದೃಷ್ಟಿಯಿಂದ ಅವನನ್ನು ನೋಡಿದರು. ಶ್ರೀಧರ ತನ್ನ ವಾಚನ್ನು ನೋಡಿಕೊಂಡು ಹೊರಬಿದ್ದ.

ವೀಣಾ ಹಿಂದಿನ ರಾತ್ರಿಯ ದೃಶ್ಯವನ್ನು ನೆನೆಯುತ್ತ ಮಲಗಿದ್ದಳು. ಅಂದಿನ ದೃಶ್ಯ ಎಷ್ಟು ಆಕಸ್ಮಿಕವಾದುದಾಗಿತ್ತೋ ಅಷ್ಟೇ ಭಯಾನಕವಾಗಿತ್ತು. ತಾನು ಯೋಚಿಸಿದ್ದೇನು? ನಡೆದ ಘಟನೆಯೆಂಥಹುದು ? ತಾಯಿಯ ಮಾತಿನಂತೆ ಸುಮ್ಮನೆ ಅಲ್ಲಿಯೆ ಉಳಿದುಕೊಂಡಿದ್ದರೆ ಯಾವ ಅಪಾಯವೂ ಇರಲಿಲ್ಲ. ಇಲ್ಲಿ ಯಾವದೋ ಅಂತ್ಯವಿಲ್ಲದ ಜಾಲದಲ್ಲಿ ಸಿಲುಕಿಹಾಕಿಕೊಂಡಿದ್ದೇನೆ. ನಿನ್ನೆ ರಾತ್ರಿ ಹೊಸ್ತಿಲಮೇಲೆ ನಿಂತಿದ್ದ ಯುವಕನ ಚಿತ್ರವನ್ನು ಚಿತ್ರಿಸಿಕೊಳ್ಳಲು ಯತ್ನಿಸಿದಳು. ಆದರೆ ಅದು ಸಾಧ್ಯವಿಲ್ಲದಾಯಿತು. ಅವನಾರು?

ಅಂದಿನ ರಾತ್ರಿ ತನ್ನ ಹಿಂದೆ ಬಂದ ಕಾರಣವೇನು?

ಕೊಲೆಗೆ ಅವನಿಗೆ ಯಾವದಾದರೂ ಸಂಬಂಧವಿದೆಯೆ?

ತಾನು ಪ್ರವೇಶಿಸುವಾಗ ಮನೆಯು ನಿರ್ಜನವಾಗಿದ್ದಿತು. ಅವನೆಲ್ಲಿ ಅಡಗಿ ಕುಳಿತು ನನ್ನ ಚಲನವಲನೆಗಳನ್ನು ನೋಡುತ್ತಿದ್ದನೋ? ಅಂದಿನ ಘಟನೆಯನ್ನು ನೆನಪಿಗೆ ತಂದುಕೊಳ್ಳುತ್ತಿದ್ದ ಅವಳ ಸ್ಥಿತಿ ನಗುತ್ತ ಕಲೆಯುತ್ತ ತನ್ನ ಸಂಗಡಿಗರೊಂದಿಗೆ ನೀರು ಕುಡಿಯಲು ಬಂದ ಹರಿಣವು ತೊರೆಯ ನೀರಿನೊಡನೆ ಚೆಲ್ಲಾಟವಾಡಿ ನೀರು ಕುಡಿದು ಉತ್ಸಾಹ ಚಪಲತೆ ತುಂಬಿ ತುಳುಕುವ ಮುಖವನ್ನು ಮೇಲೆತ್ತಿದಾಗ ಹಸಿದ ಕಣ್ಣುಗಳಿಂದ ಕುಳಿತ ವ್ಯಾಘ್ರವನ್ನು ಕಂಡಂತಾಗಿತ್ತು.

ಅಲ್ಲಿಂದ ಇಲ್ಲಿಗೆ ತನ್ನನ್ನು ತಂದವರಾರು?

ಸಂಶಯ ಬೃಹದಾಕಾರ ತಾಳಿ ಅವಳನ್ನು ಬಿರುಗಾಳಿಗೆ ಬಲಿಯಾದ ಪತಂಗದಂತೆ ದೂರ ದೂರ ಕೊಂಡೊಯ್ಯುತ್ತಿತ್ತು. ತಾನು ಈ ಆಸ್ಪತ್ರೆಗೆ ಬಂದುದು ಅವಳಿಗೊಂದು ರಹಸ್ಯವಾಗಿ ಕಂಡುಬರುತ್ತಿತ್ತು. ಇಂದು ಅವಳೊಡನೆ ಯಾರೂ ಮಾತನಾಡಿರಲಿಲ್ಲ. ಯಾರೂ ಅವಳಿಂದ ಏನನ್ನೂ ಕೇಳುವ ಗೋಜಿಗೆ ಹೋಗಿರಲಿಲ್ಲ. ನರ್ಸ ಬೆಳಗಿನ ಕಾಫಿ ಬ್ರೆಡ್ಡನ್ನು ಕೊಟ್ಟು ಮೌನವಾಗಿ ಹೊರಟು ಹೋಗಿದ್ದಳು. ತಾನು ಎರಡು ಮೂರು

ಸಲ ಕೇಳಿದರೂ ಸರಿಯಾದ ಉತ್ತರವನ್ನೆ ಕೊಟ್ಟಿರಲಿಲ್ಲ ಅವಳು. ಆದರೆ ತಾನು ಆ ರೀತಿಯಾಗಿ ಹೆಚ್ಚು ಮೌನದಿಂದಿರುವದು ಸಾಧ್ಯವಿಲ್ಲವೆಂದು ಅವಳಿಗೆ ತಿಳಿದಿತ್ತು. ವೀಣಾ ವಿಚಾರದಲ್ಲಿ ವಿವಶವಾಗಿರುವಾಗ ಶ್ವೇತಾಂಬರಿಯಾದ ನರ್ಸ ಒಳಗೆ ಬಂದಳು. ಅವಳ ಹಿಂದೆಯೆ ಸ್ಪ್ರಿಂಗಿನಬಾಗಿಲು 'ಕಿರ್ರ್'ಎಂದು ಮುಚ್ಚಿಕೊಂಡಿತು. ನರ್ಸ ಅವಳಿಗೆ ಒಂದು ವಿಸಿಟಿಂಗ ಕಾರ್ಡನ್ನು ಕೊಟ್ಟಳು. ವೀಣಾ ಅದನ್ನು ನೋಡಿ ಭೆಟ್ಟಿಯಾಗಬಹುದೆಂದು ಗೋಣು ಹಾಕಿದಳು. ನರ್ಸ ಹೊರಗೆ ಹೋದಮೇಲೆ ಸ್ಪ್ರಿಂಗಿನ ಬಾಗಿಲನ್ನು ದೂಡಿಕೊಂಡು ಪೋಲೀಸ ಡ್ರೆಸ್ಸಿನಲ್ಲಿದ್ದ ಸುಮಾರು ೩೦-೩೫ ವಯಸ್ಸಿನ ವ್ಯಕ್ತಿಯೊಬ್ಬ ಹಸನ್ಮುಖಿನಾಗಿ ಒಳಗೆ ಪ್ರವೇಶಮಾಡಿದ. ಅವನ ಕಣ್ಣುಗಳಿಂದ ಅವನು ಭಾವನಾಜೀವಿಯಾದ ವ್ಯಕ್ತಿಯಂತೆ ಕಾಣುತ್ತಿದ್ದ. ಕ್ರಾಪಿನ ಕೂದಲುಗಳು ಗಾಳಿಗೆ ಅಸ್ತವ್ಯಸ್ತವಾಗಿ ಹಾರಾಡುತ್ತಿದ್ದವು. ವೀಣಾ ನಿನ್ನಿನ ಯುವಕನೊಡನೆ ಇವನನ್ನು ಹೋಲಿಸಿದಳು. ಆದರೆ ಇವನು ಅವನಂತೆ ಕಂಡುಬರಲಿಲ್ಲ. ಆವನು ಅಲ್ಲಿಯೇ ಇದ್ದ ಚೇರಿನ ಮೇಲೆ ಕುಳಿತುಕೊಂಡು ಶಾಂತಸ್ವರದಿಂದ—

"ನನ್ನ ಪರಿಚಯ ನಿಮಗಾಗಲೇ ಆಗಿರಬಹುದು. ನಾನು ಸ್ಥಳೀಯ ಇನ್ಸಪೆಕ್ಟರನೆಂದು ಕೆಲಸ ಮಾಡುತ್ತಿದ್ದೇನೆ, ನನ್ನ ಹೆಸರು ಶ್ರೀಧರ."

ವೀಣಾ ಅವನ ಮಾತಿಗೆ ಮುಖದಲ್ಲಿ ಮುಗುಳ್ನಗೆಯನ್ನು ತುಳುಕಿಸಿದಳು ಮಾತ್ರ.

"ನಿನ್ನಿನ ವಿಷಯವಾಗಿ ನಾನು ನಿಮಗೆ ಕೆಲವು ಪ್ರಶ್ನೆಗಳನ್ನು ಕೇಳಲು ಬಯಸುತ್ತೇನೆ." ಶ್ರೀಧರ ಪೀಠಿಕೆಯನ್ನು ಹಾಕಿದ.

"ನೀವು ಅವಶ್ಯವಾಗಿ ಎಲ್ಲವನ್ನು ಕೇಳಬಹುದು. ನನಗೆ ತಿಳಿದುದನ್ನೆಲ್ಲ ಚಾಚು ತಪ್ಪದೆ ಹೇಳುವೆ."

"ಅಶ್ವತ್ಥರಾಯರಿಗೆ ನೀವೇನಾಗಬೇಕು?"

" ಆ ನಾನು ಅವರ ಮೊಮ್ಮಗಳು."

"ನೀವು ಇಲ್ಲಿಗೆ ಬರಲು ಅಶ್ವತ್ಥರಾಯರ ಟೆಲಿಗ್ರಾಮು ಕಾರಣವೆಂದು ಕಾಣುತ್ತದೆ."

"ಹೌದು" ಎನ್ನುತ್ತ, ವೀಣಾ ಅವನಿಗೆ ಇದು ಹೇಗೆ ತಿಳಿಯಿತು

ಎಂಬಂತೆ ನೋಡಿದಳು. ಶ್ರೀಧರ ಕಣ್ಣಲ್ಲಿಯ ಅವಳ ಭಾವವನ್ನು ಅರಿತು ಕೊಂಡ. ಆದರೂ ಭಾವರಹಿತನಾಗಿ—

''ಅಶ್ವತ್ಥರಾಯರ ಪ್ರೀತಿಯ ಮೊಮ್ಮಗಳೆಂದು ಕಾಣುತ್ತದೆ ನೀವು?''

''ನಿಜ. ಅಜ್ಜನನ್ನು ಕಂಡರೆ ನನಗೂ ಅಷ್ಟೇ ಪ್ರೀತಿ.''

''ನಿಮ್ಮ ತಾಯಿಯವರಿಗೆ ನಿಮ್ಮ ಅಜ್ಜನಿಗೆ ವೈಮನಸ್ಸಿತ್ತೆಂದು ಕಾಣುತ್ತದೆ.''

''ಹೌದು.'' ವೀಣಾ ಅವನೆಡೆಗೆ ವಿಸ್ಮಯದ ನೋಟಬೀರುತ್ತ ''ನಮ್ಮ ತಾಯಿಯ ಎರಡನೆಯ ವಿವಾಹ ಇದಕ್ಕೆ ಕಾರಣ'' ಎಂದಳು.

''ವೀಣಾದೇವಿ ನಿನ್ನೆ ನೀವು ಎಷ್ಟು ಗಂಟೆಗೆ ಈ ಊರಿಗೆ ಬಂದಿರಿ. ನಿಶ್ಚಿತವಾಗಿ ಹೇಳಬಹುದೆ?''

ನಿನ್ನೆ ಸುಮಾರು ೮—೩೦ ಗಂಟೆಗೆ ಇಲ್ಲಿಗೆ ಬಂದು ೯-೩೦ ಗಂಟೆ ಗೋ ಅಥವಾ ೪೦ ಕ್ಕೋ ನಮ್ಮ ಅಜ್ಜನ ಮನೆಯನ್ನು ತಲುಪಿದೆ. ಆದರೆ ಅಲ್ಲಿ...........'' ಭಯದ ಬೇಗೆಯಿಂದ ಅವಳ ಹಣೆಯ ಮೇಲೆ ಬೆವರು ಹನಿಗಳು ಮೂಡಿದವು.

''ಮುಂದೆ? '' ಶ್ರೀಧರ ಅವಳೆದುರಿಗೆ ಮುಂದಿನ ಪ್ರಶ್ನೆಯನ್ನು ನೀಡಿದ.

''ಆ ಮೇಲೆ........ ಕೊಲೆಯಾದುದನ್ನು ನೋಡಿದೆ. ನಾನು ಅಲ್ಲಿಗೆ ಹೋದಾಗ ಮನೆಯು ನಿರ್ಜನವಾಗಿತ್ತು. ಆ ಕೊಟಡಿಯಿಂದ ನಾನು ಓಡಿ ಹೊರಬರುವಾಗ ಬಾಗಿಲಲ್ಲಿ ಯಾವನೋ ಅಪರಿಚಿತ ವ್ಯಕ್ತಿ ನಿಂತಿದ್ದ. ಮುಂದೇನಾಯಿತೋ ನನಗೆ ತಿಳಿಯದು.''

''ಆ ಕಾರು ನಿಮಗೆಲ್ಲಿ ದೊರೆಯಿತು?''

''ದೊರೆಯಿತು........'' ವೀಣಾ ಪ್ರಶ್ನಾರ್ಥಕ ಮುಖಮುದ್ರೆಯಿಂದ ಅವನನ್ನು ನೋಡಿ—

''ನಾನೆ ಆ ಟ್ಯಾಕ್ಸಿಯನ್ನು ಗೊತ್ತು ಮಾಡಿಕೊಂಡು ಬಂದೆ. ಯಾಕೆ ಆದರಲ್ಲೇನಾದರೂ........'' ನಡುವೆಯೆ ತಡೆದು ಸುಮ್ಮನಾದಳು.

''ನಿನ್ನೆ ನೀವು ಡ್ರ್ಯಾಯ್ವಮಾಡಿದ ಕಾರು ಕಳುವಾದ ಕಾರು.''

''ಇನಸ್ಪೆಕ್ಟರ! ಅದು ನಿಜವಾಗಿ ಕಳವಿನ ಕಾರೆ? ಅದರ ವಿಷಯ

ವಾಗಿ ನಾನೇನು ಅರಿಯೆ?" ವೀಣಳ ಮುಖ ಭಯದಿಂದ ಬೆಳ್ಳಗಾಯಿತು ತನ್ನನ್ನು ಯಾವದೋ ಬಲೆಯು ಬಿಗಿಯುತ್ತಿದ್ದಂತೆ ಭಾಸವಾಯಿತವಳಿಗೆ.

''ಗಾಬರಿಯಾಗಲು ಕಾರಣವೇನಿಲ್ಲ. ನಿನ್ನೆಯ ಡ್ರಾಯವ್ಹರನನ್ನು ನೀವು ಗುರುತಿಸಬಹುದೇನು?''

''ಸಾಧ್ಯವಿಲ್ಲ. ಅವನ ಮುಖವನ್ನು ನಾನು ಸರಿಯಾಗಿ ನೋಡಿಲ್ಲ. ನನ್ನನ್ನು ಬಿಟ್ಟು ಹೋದ ಅವನು ತಿರುಗಿ ಬರಲೇ ಇಲ್ಲ.''

''ವೀಣಾದೇವಿ, ನಿನ್ನೆ ನಿಮ್ಮನ್ನು ಆ ರೀತಿಯಾಗಿ ಕಾಯಿಸಿದ್ದು ಉದ್ದೇಶಪೂರ್ವಕವಾಗಿ.''

''ಉದ್ದೇಶಪೂರ್ವಕವಾಗಿಯೋ?'' ಯಾವದೋ ಕಾಣಬಾರದ ದೃಶ್ಯವನ್ನು ಕಂಡಂತೆ ವೀಣಾ ಬೆಚ್ಚಿಬಿದ್ದು ಕೇಳಿದಳು. ನಿನ್ನೆ ನನಗೆ ಅಜ್ಜನ ಮನೆಯಲ್ಲಿ ಕಂಡ ವ್ಯಕ್ತಿಕೊಲೆಗಾರನೆಂದೆ ನನ್ನಭಾವನೆ.'' ವೀಣಾ ಹಿಂದಿನ ರಾತ್ರಿಯ ಸನ್ನಿವೇಷವನ್ನು ಅವನೆದುರಿಗೆ ವಿವರಿಸಿದಳು.

''ನಿಮ್ಮದು ತಪ್ಪು ಭಾವನೆ. ನಿನ್ನೆ ನೀವು ಕಂಡ ವ್ಯಕ್ತಿ ನಮ್ಮ ಸಿ. ಆಯ್. ಡಿ. ಈ ಕಳುವಾದ ಕಾರಿನ ವರದಿ ಈ ಮೊದಲೇ ಬಂದಿತ್ತು. ಅದನ್ನೆ ಹುಡಿಕಿಕೊಂಡು ನಮ್ಮ ಸಿ. ಆಯ್. ಡಿ ಅಲೆಯುತ್ತಿದ್ದ. ನಿನ್ನೆ ನಿಮ್ಮನ್ನೆ ಅನುಸರಿಸಿ ಅವ ಬಂದ."

"ಅಂದರೆ ನಿನ್ನೆ ಸೂಟುಧಾರಿಯಾಗಿ ಬಂದ ವ್ಯಕ್ತಿ ನಿಮ್ಮ ಸಿ.ಆಯ್. ಡಿ.ಯೆ ಹಾಗಾದರೆ?" ವಿಸ್ಮಿತ ಸ್ವರದಿಂದ ವೀಣಾ ಕೇಳಿದಳು.

"ಹೌದು. ನಿಮ್ಮ ಅಜ್ಜ ಈ ಮೊದಲು ಒಂದು ವಿಲ್ಲನ್ನು ತಯಾರಿಸಿದ್ದರಂತೆ ಹೌದೆ?" ಶ್ರೀಧರ ಒಂದು ಸುಳ್ಳಿನ ಬಾಣವನ್ನು ಎಸೆದ. ನಾಟಿದರೆ ನಾಟಲಿ ಬಿಟ್ಟರೆ ಬಿಡಲಿ,

ಒಂದು ವಿಲ್ಲನ್ನು ಈ ಮೊದಲು ತಯಾರಿಸಿದ್ದರು. ಅದರಲ್ಲಿ ೫ ಮಕ್ಕಳಿಗೆ ಸರಿಸಮವಾದ ಆಸ್ತಿಯನ್ನು ಬರೆದಿದ್ದರೂ ವಿಶೇಷವಾಗಿ ನನ್ನ ತಾಯಿಯವರಿಗೆ ಹೆಚ್ಚಿಗೆ ಬರೆದಿದ್ದರು. ಆದರೆ ಮುಂದೆ ತಮ್ಮ ಮಗಳು ವಿರುದ್ಧವಾಗಿ ವರ್ತಿಸುವದನ್ನು ಕಂಡು ಅದನ್ನು ನಾಶ ಮಾಡಿದರಂತೆ. ಆ ರೀತಿಯಾಗಿ ಅವರು ಒಂದು ಪತ್ರವನ್ನು ಬರೆದಿದ್ದರು.

ಇತ್ತೀಚಿಗೆ ಹೊಸ ವಿಲ್ಲನ್ನೇನಾದರೂ ಬರೆದಿದ್ದಾರೆಯೇ?

ಇಲ್ಲ. ಇತ್ತೀಚೆಗಂತೂ ನಮ್ಮ ಅವರ ಬಾಂಧವ್ಯ ಕಡಿದುಹೋಗಿತ್ತು. ಆದರೆ ಮೊನ್ನೆ ಅವರ ಟೆಲಿಗ್ರಾಮನ್ನು ಕಂಡು ಓಡಿಬಂದೆ.

ನಿಮ್ಮ ಅಜ್ಜನ ವಿಷಯವಾಗಿ ಅಂದರೆ ನಡತೆಯ ವಿಷಯವಾಗಿ ನಿಮಗೆ ಏನಾದರೂ ತಿಳಿದಿದೆಯೇ?

ಅಜ್ಜ ಯುವ್ವನದಲ್ಲಿದ್ದಾಗ ನೀತಿಯನ್ನು ಕಾಲ ಕೆಳಗೆ ಮೆಟ್ಟಿ ಸ್ವೇಚ್ಛೆ ಯಿಂದ ವರ್ತಿಸಿದರಂತೆ. ಆದರೆ ಇತ್ತಿತ್ತಲಾಗಿ ಅವರಿಗೆ ಪಶ್ಚಾತ್ತಾಪ ವಾಗಿತ್ತು.

"ಈ ನಾಲ್ವರು ಅಣ್ಣ ತಮ್ಮಂದಿರ ನಡತೆ ಹೇಗಿದೆ?"

"ನೋಡಿ ಅವರಿಗೆ ಮತ್ತು ನನಗೆ ಬಳಕೆಯಿರುವದು ಕಡಿಮೆ. ಆದರೆ ಅವರಲ್ಲಿ ಶೇಖರ ಮಾತ್ರ ಕ್ರೂರ."

"ಶ್ರೀಧರ ಅವಳ ಮಾತನ್ನು ಕೇಳಿ ಅಚ್ಚರಿಯಿಂದ ನಿಟ್ಟಿಸಿ ನೋಡಿ "ಅವನು ಕ್ರೂರನೆನ್ನಲು ಕಾರಣ?"

"ನಾನು ಬಾಲ್ಯದಲ್ಲಿ ಕಳೆದ ಸ್ವಲ್ಪ ದಿನಗಳ ಅನುಭವದಿಂದ ಹೇಳಿದೆ. ಇನ್ಸಪೆಕ್ಟರ ಅನುಚಿತ ಮತ್ತು ಆಕಸ್ಮಿಕ ಈ ಘಟನಗಳಿಂದ ನೀವೆ ನನ್ನನ್ನು ನೀವೇ ರಕ್ಷಿಸಬೇಕು. ಈ ಅಮಾನುಷ ಕೊಲೆ ರಹಸ್ಯ ಕಂಡು ಹಿಡಿಯಲು ನನ್ನಿಂದಾದ ಸಹಾಯ ಮಾಡಲು ಸಿದ್ಧಳಿದ್ದೇನೆ."

"ವೀಣಾ ನೀವೇನು ಹೆದರುವ ಕಾರಣವಿಲ್ಲ."

"ಈ ರೀತಿಯಾಗಿ ಕೊರಳು ಕತ್ತರಿಸುವದನ್ನು ನಾನು ಕನಸಿನಲ್ಲೂ ಕಂಡಿರಲಿಲ್ಲ."

"ನಿಮಗಿನ್ನೂ ವಾಸ್ತವಿಕ ಪ್ರಪಂಚದ ಕ್ರೂರನಖಗಳ ಪರಿಚಯವಿಲ್ಲ."

ಶ್ರೀಧರನ ನುಡಿ ಜೀವನದ ಅನಂತ ಕಷ್ಟಗಳ ಕುಠಾರದಿಂದ ರೂಪು ಗೊಂಡು ಮೂರ್ತಿಯಾದ ಮುದುಕನು ಮೊಮ್ಮಗನ ಮುಗ್ಧ ಮಾತುಗಳನ್ನು ಕೇಳಿ ನರೆತ ತನ್ನ ಗಡ್ಡಗಳಿಂದ ಮುಗುಳ್ನಗೆಯನ್ನು ಹೊರಸೂಸಿದಂತಿತ್ತು. "ಅವಶ್ಯಕತೆ ಬಿದ್ದರೆ ನಿಮ್ಮನ್ನು ಭೆಟ್ಟಿಯಾಗುವೆ." ಎಂದು ಶ್ರೀಧರ ಅವ ಳಿಗೆ ನಮಸ್ಕರಿಸಿ ಹೊರಬಿದ್ದ.

ಅಲ್ಲಿಂದ ತೆರಳಿದ ಶ್ರೀಧರನಿಗೆ ಮುಂದೆ ಯಾವ ದಾರಿಯನ್ನು ಅನು ಸರಿಸಿ ಹೋಗಬೇಕೆಂಬುದು, ಯಾವ ರೀತಿಯಾಗಿ ಕೊಲೆಯ ಕೇಸಿನ ಸೂತ್ರ

ಗಳನ್ನು ಹಿಡಿಯಬೇಕೆಂಬುದು ಸ್ವಲ್ಪ ಹೊತ್ತು ತಿಳಿಯದಾಯಿತು. ಪೋಲೀಸ ಸ್ಟೇಶನ್ನಿನೆಡೆ ನಡೆದ. ಪೋಸ್ಟಮಾರ್ಟಂದ ಸುದ್ದಿ ಸ್ಟೇಶನ್ನಿಗೆ ಈಗಾಗಲೆ ಬಂದಿರಬಹುದು. ಮೊದಲು ಅದನ್ನು ತಿಳಿಯಬೇಕು. ತರುವಾಯ ಅಶ್ವತ್ಥರಾಯರ ವಕೀಲ ಪ್ರಸನ್ನ ಕುಮಾರನನ್ನು ಭೆಟ್ಟಿಯಾಗುವದವಶ್ಯ. ಅವರಿಂದೇನಾದರೂ ಬೆಳಕು ಬೀಳಬಹುದು. ನಾರಾಯಣನ ತಮ್ಮ ಶೇಖರ ಬಂದಮೇಲೆ ಅವನನ್ನೊಮ್ಮೆ ನೋಡಬೇಕು. ಅಶ್ವತ್ಥರಾಯರ ಮನೆಯ ಸುತ್ತುಮುತ್ತಲಿನ ವಾತಾವರಣವನ್ನು ಚೆನ್ನಾಗಿ ಇನ್ನೊಮ್ಮೆ ಪರೀಕ್ಷಿಸಬೇಕು. ಅಂದೆ ಎಲ್ಲರೂ ಮನೆಯನ್ನು ಬಿಟ್ಟು ತ್ಯಜಿಸಬೇಕಾದರೆ ಅದಕ್ಕೊಂದು ಹಿನ್ನೆಲೆ ಇರಲೇಬೇಕು. ಆಳುಗಳಲ್ಲಿ ಯಾರದಾದರೂ ಹಸ್ತ ಇವರಲ್ಲಿ ಇರಬಹುದು. ಅಥವಾ ಅವರನ್ನೆ ಕೊಲೆಗಾರನು ಉದ್ದೇಶಪೂರ್ವಕವಾಗಿ ಕಳುಹಿಸಿರಬೇಕು. ಶ್ರೀಧರ ಪೋಲೀಸ ಸ್ಟೇಶನ್ನಿನ ಮೆಟ್ಟಲುಗಳನ್ನು ಏರುತ್ತ ಒಳಗೆ ಬಂದ. ಜೋಸೆಫರು ಅವನಿಗಾಗಿಯೇ ಕಾಯುತ್ತಿದ್ದಂತೆ ಕಂಡಿತು. ಶ್ರೀಧರ ಬಂದಮೇಲೆ ಪೋಸ್ಟ ಮಾರ್ಟಂದ ವಿಷಯವನ್ನು ಅವನಿಗೆ ತಿಳಿಸಿದರು.

"೮-೩೦ ರ ಮೇಲೆಯೇ ಕೊಲೆಯಾಗಿದೆ. ಒಳ್ಳೆ ಹರಿತವಾದ ಆಯುಧದಿಂದ ಒಂದೆ ಏಟಿಗೆ ಅಶ್ವತ್ಥರಾಯರನ್ನು ಕೊಲೆ ಮಾಡಲಾಗಿದೆ. ಎದುರುಗಡೆಯಿಂದಲೆ ಖೂನಿ ಮಾಡಿದ್ದಾರೆ."

"ಸುಮಾರು ೮-೩೦ ರಿಂದ ೯ ಗಂಟೆಯವರೆಗೆ ಯಾರಾರು ಯಾವ ಸ್ಥಳದಲ್ಲಿದ್ದರೆಂಬುದನ್ನು ತಿಳಿಯುವದು ಬಹಳ ಅವಶ್ಯವಾದುದು.''

ಶ್ರೀಧರ ಅಂದು ಅಶ್ವತ್ಥರಾಯರ ಬಂಗಲೆಯನ್ನು ಮತ್ತೆ ಪ್ರವೇಶಿಸಿದ. ಅವನು ಮನೆಯ ಸುತ್ತಲೂ ಒಂದು ಪ್ರದಕ್ಷಣೆಯನ್ನು ಹಾಕಿದ. ಮನೆಯ ನಾಲ್ಕು ಕಡೆಗೆ ವಿಶಾಲವಾದ ಸ್ಥಳವಿದೆ. ಅನೇಕ ಬಗೆಯ ಹೂವಿನ ಗಿಡಗಳಿವೆ. ತರ ತರದ ಬಣ್ಣದ ಹೂಗಳು ಅಗಳಿ ನೋಡುವವರ ಮುಖವನ್ನು ಅರಳಿಸುತ್ತಿದ್ದವು. ಮನೆಯ ಬಲಗಡೆಗೆ ಒಂದು ಸುಂದರವಾದ ಚಿಕ್ಕ ಕೊಳ. ಅದರಲ್ಲಿ ಅನೇಕ ಕಮಲಗಳು ಅನಿಲದ ಅಬ್ಬರದಿಂದ ವೀಣೆಯ ಮೃದು ಮಧುರ ಝೇಂಕಾರಕ್ಕೆ ತಲೆದೂಗುವ ಶ್ರಾವಕರಂತೆ ತಲೆದೂಗುತ್ತಿದ್ದವು ತಾವು ಅತ್ತಿತ್ತ. ಎಡಗಡೆಗೆ ಒಂದು ಟೆನ್ನಿಸ ಕೋರ್ಟು.

ಅಶ್ವತ್ಥರಾಯರ ಮೇಲಿನ ಕೋಣೆಗೆ ಎರಡು ಕಿಟಕಿಗಳಿದ್ದವು. ಅವುಗಳಿಂದ ಸುತ್ತಲಿನ ಸೌಂದರ್ಯವನ್ನು ಸವಿಯಬಹುದಿತ್ತು. ಶ್ರೀಧರ ಆ ಕಿಟಕಿಗಳ ಕೆಳಗೆ ಬಂದು ಮೇಲೆ ನೋಡಿದ. ಮೇಲೆ ಹತ್ತಿಹೋಗಲು ಯಾವ ಸಾಧನಗಳು ಇರಲಿಲ್ಲ. ಕೆಳಗೆ ಕೆಲವು ಗುಲಾಬಿಯ ಕಂಟಿಗಳು ಹೂಗಳಿಂದ ಸಮೃದ್ಧವಾಗಿ ತಲೆಬಾಗಿಸಿ ನಿಂತಿದ್ದವು. ಅವುಗಳನ್ನು ಯಾರು ಉಪಯೋಗಿಸುತ್ತಿರಲಿಲ್ಲವೆಂದು ಕಾಣುತ್ತದೆ. ಪುಷ್ಪಗಳೆಲ್ಲ ವಿಕಸಿಸಿ ತಮ್ಮ ಸೌರಭವನ್ನು ಎಲ್ಲೆಡೆಗೆ ಪಸರಿಸಿ ಒಣಗಿ ಕೆಳಗೆ ಉದುರಿದ್ದವು. ಶ್ರೀಧರ ಸೂಕ್ಷ್ಮವಾಗಿ ಗುಲಾಬಿ ಕಂಟಿಗಳನ್ನು ಪರೀಕ್ಷಿಸಿದ. ಒಂದು ಕೆಂಪನೆಯ ಎಳೆ ಆದಕ್ಕೆ ಅಂಟಿಕೊಂಡಿತ್ತು. ಅದನ್ನು ತೆಗೆದುಕೊಂಡು ಹಾಗೆಯೆ ಮುಂದುವರೆದ. ನಾಲ್ಕಾರು ಎಳೆಗಳು ಅಲ್ಲಲ್ಲಿಯೇ ಅಂಟಿಕೊಂಡಿದ್ದವು. ಮುಂದೆ ಅವು ಇದ್ದಂತೆ ಕಂಡು ಬರಲಿಲ್ಲ. ಮೇಲೆ ಕಿಟಕಿಗಳ ಬಾಗಿಲುಗಳನ್ನು ಹಾಕಲಾಗಿತ್ತು. ಆದರೆ ಇಲ್ಲಿ ಮಾತ್ರ ಯಾರೋ ಅಡ್ಡಾಡಿದ್ದರು. ಎದುರಿನಿಂದ ಬಂದು ಕೊಲೆ ಮಾಡಿ ಬಾಗಿಲುಗಳನ್ನು ಮುಚ್ಚಿ ಇಲ್ಲಿಂದ ಇಳಿಯುವದು ಅಸಾಧ್ಯ. ಉದ್ದೇಶಪೂರ್ವಕವಾಗಿ ಈ ಎಳೆಗಳನ್ನು ಇಲ್ಲಿ ಇಟ್ಟಿರುವದು ಅಸಂಭವನೀಯವಾದುದು. ಯಾವದೋ ವ್ಯಕ್ತಿ ಆತುರತೆಯಿಂದ ಅಡ್ಡಾಡುವಾಗ ಈ ಎಳೆಗಳು ಅವನಿಗರಿಯದಂತೆಯೆ ಅಂಟಿಕೊಂಡಿರಬಹುದು. ಅಂದರೆ ಕೊಲೆಗಾರ ಬೇರೆ. ಇಲ್ಲಿ ಓಡಾಡಿದ ವ್ಯಕ್ತಿ ಬೇರೆಯೇ?

ಅವರಿಬ್ಬರೂ ಒಂದೆ ವ್ಯಕ್ತಿಯೇ?

ಶ್ರೀಧರನಿಗೆ ಯಾವ ವಿಷಯವು ವಿವರವಾಗಿ ತಿಳಿಯಲಿಲ್ಲ. ಆದರೆ ಕೂಡಲೆ ಅವನಿಗೊಂದು ಯೋಚನೆಯು 'ಬಂದಿತು. ತಲೆಬಾಗಿಲಿನಿಂದ ಮೆಟ್ಟಲುಗಳನ್ನೇರಿ ಅಶ್ವತ್ಥರಾಯರ ಕೋಣೆಯನ್ನು ತಲುಪಿದ. ಕೋಣೆಯಲ್ಲಿ ಯಾರಿಗೂ ಪ್ರವೇಶ ಮಾಡಲು ಬಿಟ್ಟಿರಲಿಲ್ಲ. ಬಾಗಿಲುಗಳೆಲ್ಲ ಮೊದಲಿನಂತೆ ಹಾಕಿದಂತಿದ್ದವು. ಒಂದು ಕಿಟಕಿಯ ಬಾಗಿಲನ್ನು ತೆರೆದ ಅದರ ಕೆಳಗೆ ಗುಲಾಬಿ ಕಂಟಿಗಳಿದ್ದವು. ಬಾಗಿಲ ಹೊರಬದಿಗೆ ಒಂದು ಮೊಳೆಯನ್ನು ಬಡೆಯಲಾಗಿತ್ತು. ಆ ಮೊಳೆಗೆ ಒಂದು ಹಗ್ಗವನ್ನು ಕಟ್ಟಿ ಆ ಎರಡು ಬಾಗಿಲುಗಳನ್ನು ಅರ್ಧ ಮುಚ್ಚಿ ಬೋಲ್ಟು ಹಾಕಿದ. ಕೆಳಗೆ ಬಂದು ಹಗ್ಗದ ತುದಿಯನ್ನು ಜಗ್ಗಿದ. ಆಗ ಕಿಟಕಿಯ ಬಾಗಿಲಗಳೆರಡು "ಟಪ್" ಎಂಬ ಶಬ್ದದೊಂದಿಗೆ ಮುಚ್ಚಲ್ಪಟ್ಟವು. ಈಗ ಅವು ಒಳಗಿನಿಂದ

ಭದ್ರಪಡಿಸಿದಂತಿತ್ತು. ಕೊಲೆಗಾರ ಹೊರಗಿನ ಬಾಗಿಲಿನಿಂದ ಪ್ರವೇಶಮಾಡಿ ಹತ್ಯಗೈದು ಹಿಂದಿನ ಕಿಟಕಿಯಿಂದ ಪರಾರಿಯಾಗಿದ್ದಾನೆ. ಹಾಗೆ ಅವನು ಹೋಗುವಾಗ ಅವನು ಧರಿಸಿದ ಕೆಂಪು ಕೋಟಿನ ಎಳೆಗಳು ಅವನಿಗರಿಯದಂತೆಯೆ ಸಿಲುಕಿಕೊಂಡಿವೆ. ಈ ಮನೆಯಲ್ಲಿ ಆ ರೀತಿಯ ಕೋಟನ್ನು ಯಾರು ಧರಿಸುತ್ತಾರೆಂಬುದನ್ನು ಶೋಧಿಸಬೇಕು. ಶ್ರೀಧರ ಯೋಚನೆಯಲ್ಲಿ ಮಗ್ನನಾಗಿ ಬಳ್ಳಿಯಿಂದ ಆಚ್ಛಾದಿತವಾದ ಹಂದರದ ಹತ್ತಿರ ಬರುವಾಗ ನಾರಾಯಣ ಅವನನ್ನು ಸ್ವಾಗತಿಸಿದ. ಹೊರಗೆ ಆಗುವ ಯಾವದೋ ಗದ್ದಲವನ್ನು ಕೇಳಿ ವಿಚಾರಿಸಲು ಹೊರಗೆ ಬಂದಿದ್ದನವನು, ಇನಸ್ಪೆಕ್ಟರನನ್ನು ನೋಡಿ ಅವನಿಗೆ ಭಯವೇ ಆಯಿತು. ಆದರೂ ಆ ಭಾವವನ್ನು ಮರೆಮಾಚುತ್ತಾ ಶ್ರೀಧರನನ್ನು ಒಳಗೆ ಕರೆದುಕೊಂಡು ಹೋದ.

"ನನ್ನಿಂದ ಮತ್ಯಾವದಾದರೂ ಸಹಾಯ ಬೇಕಿತ್ತೆ ಇನಸ್ಪೆಕ್ಟರ."

—ಭಯರಹಿತ ನಮ್ರಸ್ವರದಲ್ಲಿ ನಾರಾಯಣ ಕೇಳಿದ.

"ಮತ್ತೇನಿಲ್ಲ. ನಿಮ್ಮ ತಮ್ಮಂದಿರೇನಾದರೂ ಬಂದಿರುವರೇನು ನೋಡಲು ಬಂದಿದ್ದೆ. ಆಳುಗಳು ಬಂದಿದ್ದಾರೆಯೆ?"

"ಇಬ್ಬರು ಆಳುಗಳಂತು ಬಂದಿಲ್ಲ. ಆದರೆ ಅಡುಗೆಯ ನರಸಮ್ಮನು ಬಂದಿದ್ದಾಳೆ. ಅವಳನ್ನು ಕರೆಯಲೇನು? ಪಾಪ ಅವಳಂತು ಬಹಳ ಹೆದರಿಹೋಗಿದ್ದಾಳೆ. ಬಹಳ ನಮ್ರವಾದ ಹೆಂಗಸವಳು."

ಶ್ರೀಧರ ತಾನು ಮಾಡಿದ ಶೋಧನೆಯ ಕಾರ್ಯವನ್ನು ನಾರಾಯಣನಿಗೆ ತಿಳಿಸಿ ಅವನ ಮುಖವನ್ನು ಸೂಕ್ಷ್ಮವಾಗಿ ನಿರುಕಿಸಿದ.

"ಹಾಗಾದರೆ...... ಹಾಗಾದರೆ ಹಿಂದಿನ ಕಿಟಕಿಯಿಂದ ಅವನು ಹೊರಟು ಹೋಗಿರಬಹುದೆನ್ನುತ್ತೀರಾ?"

—ಮಾತನಾಡುವ ನಾರಾಯಣ ಧ್ವನಿ ಕಂಪಿಸುತ್ತಿದ್ದುದು ಶ್ರೀಧರನಿಗೆ ತಿಳಿಯಿತು. ಅವನ ಮೋರೆಯೊಮ್ಮೆ ವಿವರ್ಣವಾಗಿ ಮತ್ತೆ ಮೊದಲಿನಂತಾದುದನ್ನು ಇನಸ್ಪೆಕ್ಟರರ ಚುರುಕ ನಯನಗಳು ಕಂಡುಕೊಂಡವು.

ನಾರಾಯಣ ಅಡುಗೆಯವಳನ್ನು ಕೆಳಗೆ ಕರೆಯಲು ಹೋದ ಮೇಲೆ ಶ್ರೀಧರ ಅವರ ಅರಿವೆಗಳ ಮೇಲಿನ ಲಾಂಡ್ರಿಯ ಗುರುತುಗಳನ್ನು ನೋಡಿದ ನರಸಮ್ಮ ಮತ್ತು ನಾರಾಯಣ ಇಬ್ಬರೂ ಬಂದರು. ನಾರಾಯಣ ಅವ

ಳಿಗೇನೋ ಧೈರ್ಯವನ್ನು ಹೇಳುತ್ತಿದ್ದ. ಅವಳು ಆಗಲೆ ಯಾವದೋ ದಟ್ಟವಾದ ಅರಣ್ಯದಲ್ಲಿ ಮಳೆಗಾಳಿಗಳಬ್ಬರದ ಮಧ್ಯದಲ್ಲಿ ದಾರಿಗಾಣದೆ ಧೈರ್ಯವನ್ನು ಕಳೆದುಕೊಂಡ ಪಾಂಥಿಕನು ಎದುರಿನಲ್ಲಿ ಮಿಂಚು ಮಿಂಚಿದಾಗ ಹೆಡೆತೆರೆದ ನಾಗರ ಹಾವನ್ನು ಕಂಡಂತೆ ಇನಸ್ಪೆಕ್ಟರನನ್ನು ಕಂಡಳು.

''ಹೆದರಬೇಡಿ ತಾಯಿ ಅಂದಿನ ನೀವು ಎಲ್ಲಿದ್ದಿರೆಂಬುದು ತಿಳಿದರೆ ಸಾಕು. ಅಂದು ನಿಶ್ಚಿತವಾಗಿ ಎಷ್ಟು ಗಂಟೆಗೆ ಮನೆಯನ್ನು ಬಿಟ್ಟರೆಂಬುದನ್ನು ಹೇಳಬಹುದೇ?''

—ವಿವರ್ಣಳಾದ ಅವಳಿಗೆ ಶ್ರೀಧರ ಧೈರ್ಯ ತುಂಬಿ ವಿಚಾರಿಸಿದ.

''ನಾನೆ ಅಂದು ಸುಮಾರು ೬—೧೫ ಕ್ಕೊ ೬—೨೦ ಕ್ಕೊ ಮನೆಯನ್ನು ಬಿಟ್ಟೆ. ಅಂದು ನನ್ನ ತಮ್ಮನ ಹೆಂಡತಿಗೆಸಖತ್ ಕಾಯಿಲೆಯಾದ್ದರಿಂದ ನಾನು ಬೇಗನೆ ತೆರಳಿದೆ.

''ನಿಮ್ಮೊಡನೆ ಅಶ್ವತ್ಥರಾಯರು ಅಂದು ಏನಾದರೂ ಮಾತನಾಡಿದರೆ ಅಥವಾ ಅವರೊಡನೆ ಯಾರಾದರೂ ಮಾತನಾಡಲು ಬಂದಿದ್ದರೇ?''

''ಇಲ್ಲ. ನನ್ನೊಡನೆಯಂತು ಅವರಾವ ಮಾತನ್ನು ಆಡಲಿಲ್ಲ. ಅವರನ್ನು ಭೆಟ್ಟಿಯಾಗಲೂ ಅಂದು ಯಾರೂ ಬಂದಿರಲಿಲ್ಲ. ಅಂದು ಶನಿವಾರ ಯಜಮಾನರು ಅಂದು ಊಟವನ್ನು ಮಾಡುವದಿಲ್ಲ. ಹಾಲನ್ನು ಕುಡಿದು ಮಲಗಿದ್ದರು. ಆದರೆ ಅಂದು ಅವರು ಸ್ವಲ್ಪ ಬಿಸಿಯಾಗಿದ್ದರು. ಸಿಡಿಮಿಡಿ ಗುಟ್ಟುತ್ತಿದ್ದರು.''

"ನೀವಿದ್ದಾಗ ಅವರು ಯಾರಿಗಾದರೂ ಫೋನು ಮಾಡಿದರೆ ಅಥವಾ ಯಾರಿಂದಲಾದರೂ ಅವರಿಗೆ ಫೋನು ಬಂದಿತ್ತೆ?''

"ಅಂಥ ಘಟನೆಯೇನು ಸಂಭವಿಸಲಿಲ್ಲ.''

"ನರಸಮ್ಮ ಈ ಮನೆಯಲ್ಲಿ ಕೆಲಸ ಮಾಡಲು ಪ್ರಾರಂಭ ಮಾಡಿ ಎಷ್ಟುದಿನಗಳಾದವು?"

"ಸುಮಾರು ೧೦-೧೨ ವರ್ಷಗಳು ಕಳೆದಿವೆ."

"ನೀವಿನ್ನು ಹೋಗಲಡ್ಡಿಯಿಲ್ಲವೆಂದು ಹೇಳಿ ಶ್ರೀಧರ ಹೊರ ಹೊರ ಹೊರಟ. ಶ್ರೀಧರ ನೇರವಾಗಿ ಪೋಲೀಸ ಸ್ಟೇಶನ್ನಿಗೆ ತೆರಳಿ ಪೋಲೀಸ ಲಿಂಗಪ್ಪನಿಗೆ ಲಾಂಡ್ರಿಯ ಮಾರ್ಕನ್ನು ತಿಳಿಸಿ ಅದನ್ನು ಶೋಧ ಮಾಡಲು

ಹೇಳಿದ. ಮನೆಗೆ ಅಲ್ಲಿಂದ ತಿರುಗಿ ಬಂದು ಊಟಮಾಡಿ ಈಸಿಚೇರಿನ ಮೇಲೆ ವಿಶ್ರಾಂತಿಗಾಗಿ ಒರಗಿದ. ತನ್ನ ಮಾತಿನಿಂದ ನಾರಾಯಣ ... ಕೆ ಹೆದರಿದನೆಂಬುದು ಶ್ರೀಧರನಿಗೊಂದು ದೊಡ್ಡ ಸಮಸ್ಯೆಯಾಯಿತು.

ಸಂಜೆಯ ೫ ಗಂಟೆಯ ಸುಮಾರಿಗೆ ಶ್ರೀಧರ ಕಾಫಿಯನ್ನು ಸೇವಿಸಿ ಪೋಲೀಸ ಸ್ಟೇಶನ್ನಿನ ಹಾದಿಯನ್ನು ಹಿಡಿದ. ಹೊಸ ವರದಿಗಳೇನಾದರೂ ಬಂದಿರುವವೇನೋ ಎಂದು ತನ್ನ ಟೇಬಲ್ಲಿನಮೇಲಿನ ಕಾಗದಪತ್ರಗಳನ್ನು ನೋಡಿದ. ಜೊಸೆಫ ಹೊರಗೆ ಯಾವದೋ ಕೆಲಸದಮೇಲೆ ತೆರಳಿದ್ದರು. ಹಳೆಯ ರೆಕಾರ್ಡುಗಳನ್ನು ತಿರುವಿ ಹಾಕುತ್ತ ಸಂಜೆಯ ಆರುಗಂಟೆಗೆ ಪ್ರಸನ್ನ ಕುಮಾರರಿಗೆ ಫೋನು ಮಾಡಿದ ಪ್ರಸನ್ನ ಕುಮಾರರು ಆಫೀಸಿ ನಲ್ಲಿಯೇ ಇದ್ದರೆಂದು ಕಾಣುತ್ತದೆ. ಅವರು ಭೆಟ್ಟಿಯಾಗಲು ಅಡ್ಡಿ ಯೇನಿಲ್ಲವೆಂದು ತಿಳಿಸಿದರು. ಪ್ರಸನ್ನ ಕುಮಾರರಿಂದ ಅಶ್ವತ್ಥರಾಯರ ಕಡೆಯ ಅಭಿಲಾಷೆಯು ತಿಳಿಯಬಹುದು. ಅವರ ವ್ಯವಹಾರದ ವಿಷಯ ವಾಗಿ, ಹಿಂದಿನ ಅನೇಕ ಅನೇಕ ಘಟನೆಗಳ ವಿಷಯವಾಗಿ ಬೆಳಕು ಕಂಡೀತು ಎಂಬ ಆಶೆಯಿಂದಲೆ ಪ್ರಸನ್ನ ಕುಮಾರರನ್ನು ಭೆಟ್ಟಿಯಾದ. ಇನ್ಸಪೆಕ್ಟರ ಬಂದು ವಕೀಲರನ್ನು ಭೆಟ್ಟಿಯಾದಾಗ ಅವರ ಗಂಭೀರ ಆಕೃತಿ ಈಸಿಚೇರಿನಮೇಲೆ ಪವಡಿಸಿತ್ತು. ಪ್ರಸನ್ನಕುಮಾರರ ಪ್ರ್ಯಾಕ್ಟೀಸು ಚೆನ್ನಾಗಿತ್ತೆಂದು ಶ್ರೀಧರ ಗ್ರಹಿಸಿದ. ಪ್ರಸನ್ನಕುಮಾರ ಶೀಖ ಜನರಂತೆ ಗಡ್ಡವನ್ನು ಬೆಳೆಯಿಸಿದ್ದರು. ಅಜಾನುಬಾಹುವಾದ ಆಕರ್ಷಕ ಗಂಭೀರ ವ್ಯಕ್ತಿತ್ವ. ಕಣ್ಣಿನಲ್ಲಿ ಎರಡನೆಯವರ ಹೃದಯವನ್ನು ಹೊಕ್ಕಿರಿಯುವ ಕಳೆಯಿದೆ. ಒಟ್ಟಿನಮೇಲೆ ಪ್ರೇಕ್ಷಕರ ಮನಃಪಟಲದ ಮೇಲೆ ಮೂಡಿ ನಿಲ್ಲುವ ಆಕೃತಿ. ಬಾಯಲ್ಲಿಯ ಸಿಗಾರು ಹೊಗೆಯನ್ನು ಕಾರುತ್ತಿತ್ತು. ಶ್ರೀಧರ ಒಳಗೆ ಅಡಿಯಿಟ್ಟ ಕ್ಷಣ ಪ್ರಸನ್ನ ಕುಮಾರರು ಸುಪ್ರಸನ್ನಮೊಗ ದಿಂದ ಅವನನ್ನು ಸ್ವಾಗತಿಸಿದರು.

"ಇನ್ಸಪೆಕ್ಟರ ನಿಜವಾಗಿ ನಿಮ್ಮ ಆಗಮನದಿಂದ ನನಗೆ ಆನಂದ ವಾಗಿದೆ. ನೀವು ಇಚ್ಛಿಸಿದ ಪ್ರಶ್ನೆಗಳನ್ನು ಕೇಳಬಹುದು.''

ಅವರ ಧ್ವನಿ ನೇರವಾಗಿ ಬಿಟ್ಟ ಅಂಬಿನಂತಿತ್ತು.

"ನಾನು ನೀವು ಅಶ್ವತ್ಥರಾಯರ ವಕೀಲರೆಂದು ಕೇಳಿದ್ದೇನೆ. ಅವ ರನ್ನು ನೀವು ಎಷ್ಟುದಿನದಿಂದ ಬಲ್ಲಿರಿ?"

"ಅವರನ್ನು ನಾನು ಎಂಟು ಹತ್ತು ವರುಷಗಳಿಂದಲೂ ಬಲ್ಲೆ."

"ಮಿ. ಪ್ರಸನ್ನಕುಮಾರ ಅವರ ಬಿಜಿನಿಸ್ಸಿನ ವಿಷಯವಾಗಿ ನಿಮಗೇನಾದರೂ ವಿವರಗಳು ತಿಳಿದುಬಂದಿವೆಯೇ?"

"ನನಗೆ ತಿಳಿದಿರುವದಿಷ್ಟೇ ಅವರು ಯಾವದೋ ಭಂಗಾರದ ವ್ಯವಹಾರದಲ್ಲಿ ಅಪರಿಮಿತ ಧನವನ್ನು ಗಳಿಸಿದ್ದಾರೆ. ಜನ ಅವರ ಬಗ್ಗೆ ಏನೇನೋ ವದಂತಿಗಳನ್ನು ಹುಟ್ಟಿಸಿದ್ದಾರೆ. ಆದರೆ ನಾನು ಮಾತ್ರ ಆ ವಿಷಯವಾಗಿ ಯಾವ ಲಕ್ಷವನ್ನು ಕೊಟ್ಟಿಲ್ಲ. ಅಶ್ವತ್ಥರಾಯರು ಮಾತ್ರ ಯೋಗ್ಯರಾದ ಮನುಷ್ಯರು. ಈ ರೀತಿಯಾಗಿ ಅವರ ದಾರುಣ ಹತ್ಯವು ನಡೆದಿರುವದು ತೀರ ಶೋಚನೀಯ ವಿಷಯ."

"ಮಿ. ಪ್ರಸನ್ನಕುಮಾರ ಅಶ್ವತ್ಥರಾಯರು ಸಾಯುವ ಮೊದಲು ನಿಮಗೆ ಫೋನು ಮಾಡಿದ್ದರಂತೆ.?

"ಅಂದೆ ಹೌದು ಅವರಂದು ತಮ್ಮ ಮನೆಯಲ್ಲಿಯ ಬಂಗಾರದ ಘಟ್ಟಿಗಳು ಕಳವಾಗಿವೆಯೆಂದು ತಿಳಿಸಿದ್ದರು."

"ಬಂಗಾರದ ಘಟ್ಟಿಗಳು."

—ಶ್ರೀಧರಧ್ವನಿ ಅಚ್ಚರಿಯಿಂದ ಅರ್ಧದಲ್ಲಿಯೆ ಪರಿಸಮಾಪ್ತಿಯನ್ನು ಹೊಂದಿತ್ತು.

"ಅವರು ತಮ್ಮ ಹತ್ತಿರಬಂಗಾರದ ಘಟ್ಟಿಗಳನ್ನಿಟ್ಟುಕೊಂಡಿದ್ದರಂತೆ ಅದು ಈ ವರೆಗೂ ತಿಳಿದಿರಲಿಲ್ಲ. ಅವರು ಮೊನ್ನೆ ಅವು ಕಳವಾಗಿವೆಯೆಂದು ತಿಳಿಸಿದ ಮೇಲೆ ನನಗೆ ಬಹಳ ಆಚ್ಚರಿಯಾಯಿತು. ಪೋಲೀಸರಿಗೆ ತಿಳಿಸಬೇಕೋ ಬೇಡವೋ ಎಂದು ನನ್ನನ್ನು ವಿಚಾರಿಸಿದರು,"

"ನೀವೇನು ಉತ್ತರ ಕೊಟ್ಟಿರಿ."

"ನೋಡಿ ಇನಸ್ಪೆಕ್ಟರ ಅಶ್ವತ್ಥರಾಯರಿಗೆ ತಾವು ಇಟ್ಟುಕೊಂಡ ಬಂಗಾರದ ಘಟ್ಟಿಗಳ ವಿಷಯ ಯಾರಿಗೂ ತಿಳಿಯಬಾರದೆಂದಿತ್ತು. ಪೋಲೀಸರಿಗೆ ತಿಳುಹಿದರೆ ಎಲ್ಲಿ ತಮ್ಮ ವಿಚಾರಣೆ ತುದಿ ಮೊದಲಿಲ್ಲದೆ ಸಾಗುವದೋ ಎಂಬ ಭಯ ಅವರಿಗೆ ಜನರಲ್ಲಿ ತಮ್ಮ ಹೆಸರು ಈ ರೀತಿ

ಯಾಗಿ ಪ್ರಚಾರವಾಗುವದು ಬೇಡವಾಗಿತ್ತು. ಇವನ್ನೆಲ್ಲ ನೋಡಿ ನಾನು ವಿಚಾರ ಮಾಡಿ ಮರುದಿನ ಅವರನ್ನು ಭೆಟ್ಟಿಯಾಗುವೆನೆಂದು ತಿಳಿಸಿದೆ. ಆದರೆ ಮರುದಿನ ಅವರೇ ಇರಲಿಲ್ಲ.

--ಪ್ರಸನ್ನಕುಮಾರರ ಧ್ವನಿಯಲ್ಲಿ ವಿಷಾದ ಅನುಕಂಪಗಳು ತುಂಬಿದ್ದವು.

"ಅಶ್ವತ್ಥರಾಯರ ಇತ್ತೀಚಿಗೆ ಹೊಸ ವಿಲ್ಲನ್ನೇನಾದರೂ ತಯಾರಿಸಿದ್ದಾರೆಯೇ?"

"ಸುಮಾರು ಮೂರು ನಾಲ್ಕು ತಿಂಗಳ ಕೆಳಗೆ ಒಂದು ವಿಲ್ಲನ್ನು ತಯಾರಿಸಿದ್ದಾರೆ. ಮೊದಲನೆಯ ವಿಲ್ಲಿನಲ್ಲಿ ತಮ್ಮ ಮಕ್ಕಳಿಗೆಲ್ಲ ಸರಿಯಾಗಿ ಆಸ್ತಿಯನ್ನು ಹಂಚಿದ್ದರು. ಆದರೆ ಇತ್ತಿತ್ತಲಾಗಿ ಮಕ್ಕಳ ಮತ್ತು ಅವರ ನಡುವಿನ ಮನಸ್ಥಿತಿ ಚನ್ನಾಗಿರಲಿಲ್ಲವೆಂದು ಕಾಣುತ್ತದೆ. ಹೊಸ ವಿಲ್ಲಿನ ಪ್ರಕಾರ ಅವರ ಆಸ್ತಿಯು ಬಹುಭಾಗ ಅವರ ಮೊಮ್ಮಗಳಾದ ವೀಣಾಳೆಂಬುವಳಿಗೆ ಹೋಗುತ್ತದೆ."

"ಅವರ ಮೊಮ್ಮಗಳು ಕೊಲೆಯಾದ ದಿನವೇ ಇಲ್ಲಿಗೆ ಬಂದಿದ್ದಾಳೆ."

"ಹಾಗೋ ನನಗೆ ತಿಳಿದೆಯಿರಲಿಲ್ಲ."

--ಪ್ರಸನ್ನಕುಮಾರ ಧ್ವನಿಯಲ್ಲಿ ವಿಸ್ಮಯವು ತುಂಬಿತ್ತು.

"ಮಿ. ಪ್ರಸನ್ನಕುಮಾರ ನಿಮ್ಮಿಂದ ಬಹಳ ಉಪಕಾರವಾಯಿತು."

"ಉಪಕಾರದ ಮಾತೆಲ್ಲಿಯದು ಬಿಡಿ. ಇಂಥ ಅನ್ಯಾಯವು ನಡೆದಾಗ ಅದಕ್ಕೆ ಸಕ್ರಿಯ ಸಹಾನುಭೂತಿಯನ್ನು ತೋರುವದು ಪ್ರತಿಯೊಬ್ಬನ ಕರ್ತವ್ಯ. ನಿಜವಾಗಿ ನಾನು ಈ ಕೇಸಿನಲ್ಲಿ ಬಹಳ ಆಸಕ್ತನಾಗಿದ್ದೇನೆ. ನಿಮಗೆ ಯಶಸ್ಸು ಸಿಗಲೆಂದು ನನ್ನ ಹಾರ್ದಿಕವಾದ ಹಾರೈಕೆ."

"ಮಿ. ಪ್ರಸನ್ನಕುಮಾರ ನಿಮ್ಮ ಹಾರೈಕೆಗೆ ನನ್ನ ಅಭಿನಂದನೆಗಳು"

ಪ್ರಸನ್ನಕುಮಾರ ಆಫೀಸಿನಿಂದ ಹೊರಬಿದ್ದ ಶ್ರೀಧರ ವಾಚನ್ನು ನೋಡಿಕೊಂಡ ರಾತ್ರಿಯ ೮—೩೦ ಗಂಟೆಯಾಗಿತ್ತು. ಮನೆಗೆ ಹೋಗುವದೆ ಉತ್ತಮವೆಂದು ಕಾರನ್ನು ಡ್ರಾಯ್ವ ಮಾಡಿಕೊಂಡು ವಿಚಾರಗಳಿಗೆ

ತನ್ನ ಮನವೊಪ್ಪಿಸಿದ ಬಂಗಾರದ ಘಟ್ಟಿಗಳ ವಿಷಯ ಅವನ ಮನದಿ ದುರು ಬೃಹದಾಕಾರ ತಾಳಿ ನಿಂತಿತ್ತು. ಈ ಬಂಗಾರದ ಘಟ್ಟಿಗಳ ವಿಷ ಯವಾಗಿಯೇ ಅವರ ಕೊಲೆಯಾಗಿದೆಯೇ? ಅಶ್ವತ್ಥರಾಯರು ಅಂದು ವಿವಶರಾಗಿದ್ದೇಕೆ? ವೀಣಾಳಿಗೆ ಟೆಲಿಗ್ರಾಮನ್ನು ಕೊಟ್ಟು ಯಾಕೆ ಕರೆ ಯಿಸಿದರು? ಬಹುಶಃ ತಮ್ಮ ಹೊಸ ವಿಲ್ಲಿನ ವಿಚಾರವನ್ನು ಅವಳಿಗೆ ತಿಳಿಸುವದಕ್ಕಾಗಿ ಇರಬಹುದು. ಅಶ್ವತ್ಥರಾಯರ ಮಕ್ಕಳು ಹೊಸ ವಿಲ್ಲಿನ ವಿಚಾರ ಕೇಳಿ ವೀಣಳ ಮೇಲೆ ಕುಪಿತರಾಗುವದು ಸಹಜಿಕವಾದುದು. ವಿಷಯ ಅವನಿಗೆ ತೊಡಕು ತೊಡಕಾಗಿಯೆ ಕಂಡಿತು. ಕಾರನ್ನು ಗ್ಯಾರೇ ಜಿನಲ್ಲಿ ಬಿಟ್ಟು ಶ್ರೀಧರ ಮೆಟ್ಟಲುಗಳನ್ನೇರಿದ. ಸುಮಾರು ಹತ್ತು ನಿಮಿಷ ಗಳಲ್ಲಿ ಊಟವನ್ನು ಪೂರೈಸಿ ತನ್ನ ಪ್ರಾಯವ್ಹೆಟರೂಮಿನಲ್ಲಿ ಕುಳಿತು ಸುತ್ತಲು ಹರಡಿಕೊಂಡಿದ್ದ ಬಿಳಿಯ ಧೂಮದಿಂದ ಅವನ ಶರೀರ ಮರೆ ಯಾಯಿತು.

— ೪ —

ಮರುದಿನ ಬೆಳಗಿನಲ್ಲಿ ಶ್ರೀಧರ ಪ್ರಾತಃಕಾಲದ ತನ್ನ ಕಾರ್ಯಗಳನ್ನು ಮುಗಿಸಿ ೯ ಗಂಟೆಗೆ ಪೋಲೀಸಸ್ಟೇಶನ್ನಿನಲ್ಲಿದ್ದ. ಜೋಶಫರು ಯಾವದೋ ಕೆಲಸದಲ್ಲಿ ತಲ್ಲೀನರಾಗಿದ್ದರು. ವೃತ್ತಿನಿಯಮದಂತೆ ಇನಸ್ಪೆಕ್ಟರರಿಗೆ ತಮ್ಮ ಸಲಾಮನ್ನು ಸಲ್ಲಿಸಿದರು. ಶ್ರೀಧರ ಯಥಾವಿಧಿಯಾಗಿ ತನ್ನ ಸ್ಥಾನವನ್ನಲಂಕರಿಸಿದ. ನಾಲ್ಕೈದು ನಿಮಿಷಗಳು ಉರುಳಿದ ಮೇಲೆ ಜೋಸೆಫರು—

"ನಿನ್ನೆ ಅಶ್ವತ್ಥರಾಯರ ಉಳಿದ ಮಕ್ಕಳು ಬಂದರು" ಎಂದರು.

"ಶೇಖರನು ಸಹ"

"ಹೌದು ನಿನ್ನೆ ರಾತ್ರಿ ಅವನನ್ನು ರೇಲ್ವೆ ಸ್ಟೇಶನ್ನಿನಲ್ಲಿಯೇ ಕಂಡೆ."

"ಹಾಗಾದರೆ ನಿನ್ನೆ ರಾತ್ರಿ ನೀವು ರೇಲ್ವೆ ಸ್ಟೇಶನ್ನಿಗೆ ತೆರಳಿದ್ದಿರೋ?

"ಹೌದು. ಹಳೆಯ ಕೇಸಿನ ವಿಷಯವಾಗಿ ಸ್ವಲ್ಪ ಇನಾಕ್ವಯರಿ ಮಾಡಬೇಕಾಗಿತ್ತು ಆದರಿಂದ ಹೋಗಿದ್ದೆ."

"ವೀಣಾದೇವಿಯನ್ನು ಕಂಡಿದ್ದಿರಾ ನಿನ್ನೆ."

"ಹೌದು. ನಿನ್ನೆ ಅವಳನ್ನು ಭೆಟ್ಟಿಯಾಗಿದ್ದೆ. ಅವಳು ತಿರುಗಿ ಮನೆಗೆ ಹೋಗಲು ತವಕಪಡುತ್ತಿದ್ದಾಳೆ."

"ತಿರುಗಿ ಮನೆಗೆಂದರೆ ತಾಯಿಯ ಮನೆಗೋ ಅಥವಾ ಅಜ್ಜನ ಮನೆಗೋ?"

"ಅಜ್ಜನ ಮನೆಗೆ."

"ಹೊಸ ವಿಲ್ಲಿನ ವಿಚಾರ ನೀವೇನಾದರೂ ಕೇಳಿದ್ದೀರಾ?"

"ಇಲ್ಲ. ಯಾಕೆ ಆದರಿಂದೇನಾದರೂ........"

— ಜೋಸೆಫರು ಕುತೂಹಲದಿಂದ ಶ್ರೀಧರನ ಮೋರೆಯನ್ನು ನೋಡಿದರು.

"ಈ ಹೊಸ ವಿಲ್ಲಿನ ಪ್ರಕಾರ ಆಸ್ತಿಯ ಬಹುಭಾಗ ವೀಣಾಳಿಗೆ ಹೋಗುತ್ತದೆ."

''ಹಾಗೇನು? ಈ ಕೊಲೆಗೂ ಹೊಸ ವಿಲ್ಲಿಗೂ ಯಾವದಾದರೂ ಸಂಬಂಧವಿದೆಯೆಂದು ನಿಮ್ಮ ಅಭಿಮತವೇ?''

''ಸಂಬಂಧ ಈಗಿರದಿದ್ದರೂ ಮುಂದೆ ಬರಬಹುದು."

ಶ್ರೀಧರನಿಗೆ ಮತ್ತು ಜೋಸೆಫರಿಗೆ ಮಾತು ನಡೆದಾಗ ಲಿಂಗಪ್ಪ ಬಂದು ಸ್ಯಾಲೂಟ ಮಾಡಿದ.

"ಏನು ಲಿಂಗಪ್ಪ ಲಾಂಡ್ರಿಯ ಪತ್ತೆಯೇನಾದರೂ ಆಯಿತೆ?"

''ಆಯಿತು ಸರ್. ಸೆಂಟ್ರಲ್ ರೋಡಿನಲ್ಲಿರುವ ಕಡೆಯ ಅಂಗಡಿ ಯವನೆ ಈ ರೀತಿಯ ಮಾರ್ಕುಗಳನ್ನು ಹಾಕುತ್ತಾನೆ. ಅವನು ಅಶ್ವತ್ಥ ರಾಯರ ಅರಿವೆಗಳನ್ನು ವಾಶಮಾಡುತ್ತಿರುವದಾಗಿ ತಿಳಿಸಿದೆ.''

''ಸೆಂಟ್ರಲ್ ರೋಡಿನ ಪಕ್ಕದಲ್ಲೆ ನಾನು ಹೋಗಿ ಅವನನ್ನು ಕಾಣುವೆ.''

ಲಿಂಗಪ್ಪ ವಿಧೇಯತೆಯಿಂದ ತನ್ನ ಅಧಿಕಾರ ಸಲ್ಲಿಸಿ ತನ್ನ ಕಾರ್ಯ ಕ್ಕಾಗಿ ಹೊರಟು ಹೋದ.

''ಜೋಸೆಫ ಅಶ್ವತ್ಥರಾಯರ ಮನೆಗೆ ಫೋನು ಮಾಡಿ ಇಂದು ಅವರ ಮೂರು ಮಕ್ಕಳನ್ನು ನೋಡಿಕೊಂಡು ಬರೋಣ. ೧೫-೨೦ ನಿಮಿಷಗ ಳಲ್ಲಿ ಶ್ರೀಧರನ ಕಾರು ಅಶ್ವತ್ಥರಾಯರ ಬಂಗಲೆಯ ಎದುರು ನಿಂತಿತ್ತು. ನಾರಾಯಣನೆ ಬಂದು ಅವರನ್ನು ಒಳಗೆ ಕರೆದುಕೊಂಡು ಹೋಗಿ ಒಂದು ರೂಮಿನಲ್ಲಿ ಕೂಡಿಸಿದ.

ಶ್ರೀಧರ ಮತ್ತು ಜೋಶೆಫರಿಬ್ಬರು ಒಂದು ಸೋಫಾದ ಮೇಲೆ ಮಂಡಿಸಿದರು.

''ಮಿ ನಾರಾಯಣ ನಿಮ್ಮ ತಂದೆಯವರು ಮಾಡಿದ ಫೋನಿನ ವಿಷಯ ವಿವರವಾಗಿ ತಿಳಿಯಿತೇ?"

''ಪ್ರಸನ್ನಕುಮಾರರು ಅದನ್ನು ಹೇಳಿದರು. ಅದನ್ನು ಕೇಳಿ ನನಗೆ ಬಹಳ ಆಶ್ಚರಿಯಾಗಿದೆ."

''ಅವರು ಮನೆಯಲ್ಲಿಟ್ಟ ಬಂಗಾರದ ಘಟ್ಟಿಗಳ ವಿಷಯ ನಿಮಗೆ ತಿಳಿಯದೇನು?''

'ಅದರ ಬಗ್ಗೆ ನನಗೆ ಲವಲೇಶವಾದರೂ ನನಗೆ ತಿಳಿದಿರಲಿಲ್ಲ.''

''ಹೊಸ ವಿಲ್ಲಿನ ವಿಷಯವಾಗಿ....''

''ಅದರ ವಿಷಯವಾಗಿಯೂ ಏನೊಂದು ತಿಳಿದಿರಲಿಲ್ಲ. ಪ್ರಸನ್ನ ಕುಮಾರರಿಂದಲೇ ತಿಳಿಯಿತು. ನಮ್ಮ ತಂದೆಯವರು ವಿಶ್ವಾಸಘಾತಕ ರೆಂದು ತಿಳಿದಿರಲಿಲ್ಲ.

ನಾರಾಯಣ ತನ್ನ ಅಂತರಾಳದ ಅಳಲನ್ನು ಅರಿವಿಲ್ಲದಲೆ ಮಾತಿನಲ್ಲಿ ತೋಡಿಕೊಂಡ. ತನ್ನ ತಮ್ಮಂದಿರನ್ನು ಕಳುಹಿಸಿಕೊಡುವೆನೆಂದು ಹೇಳಿ ಅಲ್ಲಿಂದ ತೆರಳಿದ.

"ಅವನ ಪರಿಸ್ಥಿತಿ ಕನಿಕರಾಸ್ಪದವಾಗಿಲ್ಲವೇ ಜೋಸೆಫ."

—ಶ್ರೀಧರ ತನ್ನಂತರಂಗದ ಸಹಾನುಭೂತಿಯನ್ನು ತೋರಿಸಿದ.

"ಇಂದಿನ ವರೆಗೆ ಯಾವ ಚಿಂತೆಯಿಲ್ಲದೆ, ಸುಖಜೀವನವನ್ನು ಸಾಗಿಸಿದ್ದರು. ಈಗ ಅದಕ್ಕೆ ಕಲ್ಲು ಬಿದ್ದಿದೆ. ಜೀವನವೆಂಬುದೇನೆಂಬುದು ಈಗ ಅವರಿಗೆ ತಿಳಿಯಲಿ.

—ಜೋಸೆಫರು ಶ್ರೀಧರನ ಸಹಾನುಭೂತಿ ಯೋಗ್ಯವಾದುದಲ್ಲವೆಂದು ಅದನ್ನು ಅಲ್ಲಗಳೆದು ಅಪ್ರತ್ಯಕ್ಷವಾಗಿ ಖಂಡಿಸಿದರು. ಇವರೀರ್ವರು ಮಾತನಾಡುತ್ತಿದ್ದಾಗ ಒಬ್ಬ ಯುವಕ ಪ್ರವೇಶಮಾಡಿದ. ಫ್ರೆಂಚ್‌ಕಟ್ ಮೀಸೆ. ನೋಡಲು ಕುರೂಪಿಯು ಅಲ್ಲ ಸ್ಫುರದ್ರೂಪಿಯು ಅಲ್ಲ. ಸಾದುಗಪ್ಪು ಬಣ್ಣ. ಅವನು ಬಂದು ಇನ್ಸಪೆಕ್ಟರರ ಎದುರಿಗಿರುವ ಖುರ್ಚಿಯಲ್ಲಿ ಕುಳಿತುಕೊಂಡ.

"ನಿಮ್ಮ ಹೆಸರು'' ಎಂದು ಶ್ರೀಧರ ಆಗಂತುಕನ ಹೆಸರು ಕೇಳಿದ.

"ನನ್ನ ಹೆಸರು ಸುರೇಶ. ನಾನು ದೆಹಲಿಯಲ್ಲಿ ಇನ್ಸುರನ್ಸ ಕಂಪನಿಯ ಮ್ಯಾನೇಜರನಾಗಿದ್ದೇನೆ.''

"ಮಿ. ಸುರೇಶ ನೀವು ನಿಮ್ಮ ತಂದೆಯವರೊಡನೆ ಬಡಿದಾಡಿ ಮನೆಯನ್ನು ತ್ಯಜಿಸಿದ್ದಿರೆಂದು ಕೇಳಿದ್ದೇನೆ.''

"ಹೌದು ನಮ್ಮ ತಂದೆಯವರ ನಡತೆ ದಾರಿಬಿಟ್ಟುದಾಗಿತ್ತು. ಹಣದ ಮದದಿಂದ ತಾವು ಮಾಡಿದ ಅನೇಕ ಕೃತ್ಯಗಳನ್ನು ಮುಚ್ಚಿಕೊಂಡಿದ್ದಾರೆ. ನಮ್ಮನ್ನಂತೂ ಅವರು ಕೇಳುತ್ತಲೇ ಇರಲಿಲ್ಲ. ಅವರು ತರುಣರಿದ್ದಾಗ ಅವರ ಜೀವನ ಕಡಿವಾಣ ಕಳಚಿದ ಕುದುರೆಯಂತಿತ್ತು. ಮನೆಯಲ್ಲಿ ನಮಗೆ ಯಾವ ಸ್ವತಂತ್ರತೆಯೂ ಇರಲಿಲ್ಲ. ನಮ್ಮ ತಂದೆಯವರದೆ

ಸರ್ವಾಧಿಕಾರ. ನಾವು ೫-೬ ವರುಷದವರಿರುವಾಗಲೇ ನಮ್ಮ ತಾಯಿಯವರು ತೀರಿಕೊಂಡರಂತೆ. ಅವರೆಂತು ಇವರ ಕೈಯಲ್ಲಿ ಜೀವನ ಸಾಗಿಸಿದರೋ ಏನೋ? ದಿನಾಲು ಅವರ ಮತ್ತು ನಮ್ಮ ನಡುವೆ ಜಗಳವಾಗತೊಡಗಿದ್ದರಿಂದ ಈ ಮನೆಯನ್ನು ಬಿಟ್ಟೆವು. ಎಷ್ಟಾದರೂ ತಂದೆ ನೋಡಿ ಅವರ ಹತ್ಯೆಯಿಂದ ನನಗೂ ಬಹಳ ವಿಷಾದವಾಗಿದೆ.

—ಸುರೇಶನ ಮಾತು ಹಿಡಿದಿಟ್ಟ ನದಿಯು ಒಡ್ಡನ್ನು ಒಡೆದಂತಾಗಿತ್ತು. ಶಿಖಿಯಿಂದ ಸಿಡಿದುಬಂದ ಕಿಡಿಗಳಂತೆ ಅವನ ಸೇಡಿನ ನುಡಿಗಳಿದ್ದವು.

"ನೀವು ಇಲ್ಲಿರುವಾಗ ನಿಮ್ಮ ತಂದೆಯವರನ್ನು ಯಾರಾದರೂ ಭೆಟ್ಟಿಯಾಗಲು ಬರುತ್ತಿದ್ದರೇನು?"

"ನಮ್ಮ ತಂದೆಯವರನ್ನು ಆ ರೀತಿಯಾಗಿ ಭೆಟ್ಟಿಯಾಗಲು ಯಾರು ಬರುತ್ತಿರಲೇ ಇಲ್ಲ. ಒಂದಿಬ್ಬರು ಬಂದಿದ್ದರೂ ನನಗೆ ಈಗ ನೆನಪಿಲ್ಲ.

"ನಿಮ್ಮ ತಂದೆಯವರದು ಏಕಾಂತ ಜೀವನವೆನ್ನಿ."

"ಹಾಗೆಂದು ನಿರ್ವಿವಾದವಾಗಿ ಹೇಳಬಹುದು. ಯಾರಿಗೂ ತಿಳಿಸದೆ ಮಾಡುವದು ಅವರ ಸ್ವಭಾವ."

"ಮಿ. ಸುರೇಶ ನೀವಿನ್ನು ಹೋಗಲಡ್ಡಿಯಿಲ್ಲ." ಸುರೇಶ ಹೋಗಿ ನಾಲ್ಕೈದು ನಿಮಿಷದ ನಂತರ ಮಾಧವ ಪ್ರವೇಶ ಮಾಡಿದ. ನೋಡಲು ನಾರಾಯಣನಂತೆಯೇ ಇದ್ದ. ಅವನು ಬಂದು ಕುಳಿತಮೇಲೆ ಶ್ರೀಧರ—

"ಮದ್ರಾಸಿನಲ್ಲಿ ಕೆಲಸ ಮಾಡುವವರು ನೀವೆ ಎಂದು ಕಾಣುತ್ತದೆ."

"ಹೌದು ನಾನೆ ನಮ್ಮ ಮಾವನವರ ಮೋಟಾರ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದೇನೆ."

"ನೀವು ಮನೆಬಿಟ್ಟು ಹೋಗಲು ಕಾರಣ."

"ನಮ್ಮ ತಂದೆಯವರಿಗೂ ನಮಗೂ ಕೂಡಿ ಬರದ್ದರಿಂದ ನಾವು ಬೇರೆಯಾಗಬೇಕಾಯಿತು. ಜಗತ್ತಿನಲ್ಲಿ ಧನಕ್ಕಿಂತಲೂ ಮಾನ ಮಹತ್ವದ್ದು."

"ಮಿ. ಮಾಧವ,ನೀವು ಇಲ್ಲಿ ವಾಸಿಸುವಾಗ ನಿಮ್ಮ ತಂದೆಯವರನ್ನು ಯಾರಾದರೂ ಭೆಟ್ಟಿಯಾಗಲು ಬರುತ್ತಿದ್ದರೆ?"

"ನಮ್ಮ ತಂದೆಯವರೊಡನೆ ವ್ಯವಹಾರ ಮಾಡಿದ ವ್ಯಕ್ತಿಗಳನ್ನಂತು ನಾನರಿಯೆ."

ನಿಮ್ಮ ತಂದೆಯವರನ್ನು ಯಾರಾದರೂ ದ್ವೇಷಿಸುತ್ತಿದ್ದರೇ?''

''ಅವರನ್ನು ದ್ವೇಷಿಸುತ್ತಿದ್ದವರೆಂದರೆ ನಾವೆ. ನಮಗೆ ತಿಳಿಯದಂತೆ ಅವರ ಶತ್ರುಗಳು ಇರಬಹುದು. ಅವರ ನೀತಿ ಮಿತಿಯನ್ನು ಮೀರಿತ್ತು.'' ನಿಮಗೆ ಯಾವ ರೀತಿಯ ಸಹಾಯ ಮಾಡಲಿಲ್ಲವೆಂದು ನನಗೆ ವಿಷಾದ ವೆನಿಸುತ್ತದೆ.''

—ಮಾಧವ ತನ್ನ ಅಸಮರ್ಥತೆಯನ್ನು ತೋಡಿಕೊಂಡ.

ಶ್ರೀಧರ- ವ್ಯಸನಪಡಲು ಕಾರಣವಿಲ್ಲವೆಂದು ಹೇಳಿದ. ಜೋಸೆಫರು ಮಾಧವ ಹೊರಗೆ ಹೋದುದನ್ನು ಕಂಡು—

''ಇವರಬ್ಬರಿಗೂ ಯಾವ ವಿಷಯವು ತಿಳಿಯದೆಂದು ಕಾಣುತ್ತದೆ.''

'' ಅವರಿಬ್ಬರು ಮಾತನಾಡಿದ ರೀತಿಯಿಂದ ಹಾಗೆಯೇ ಕಂಡು ಬರುತ್ತದೆ. ಅವರ ತಂದೆಯ ವಿಲ್ಲಿನ ವಿಷಯದಲ್ಲಿ ಅವರಿಗೇನು ಆಶೆ ಯಿದ್ದಂತೆ ಕಾಣುವದಿಲ್ಲ."

''ಆಶೆ ಅವರಿಗೆ ಮೊದಲಿನಿಂದಲೂ ಇಲ್ಲವೇ ಇಲ್ಲವೆಂದು ಕಾಣುತ್ತದೆ ಅವರು ಎಂದೋ ತಮ್ಮ ತಂದೆಯ ಋಣವನ್ನು ಕಡಿದುಕೊಂಡಿದ್ದಾರೆ."

ಉಲನ್ ಪ್ಯಾಂಟು ಧರಿಸಿದ ಒಳ್ಳೆಯ ವರ್ಚಸ್ವಿಯಾದ ಯುವಕ ಎದೆ ಸೆಟೆಸಿಕೊಂಡು ಪೋಲೀಸ ಅಧಿಕಾರಿಗಳೆದುರಿಗೆ ಬಂದು ಕುಳಿತು ಕೊಂಡ. ವ್ಯಕ್ತಿ ಬಲಶಾಲಿಯಾಗಿದ್ದ. ಅವನ ಕಿರುಮೀಸೆ ಅವನ ಮೋರೆಗೆ ಅದೊಂದು ಬಗೆಯ ಶೋಭೆಯನ್ನು ತಂದುಕೊಟ್ಟಿತ್ತು.

''ನಿಮ್ಮ ಹೆಸರು" ಶ್ರೀಧರ ಆ ಯುವಕನನ್ನು ನೋಡಿ ಕೇಳಿದ.

''ಶೇಖರ. ಅಶ್ವತ್ಥರಾಯರ ಕಡೆಯಮಗ ನಾನು.'

—ಅವನ ಧ್ವನಿ ಸೈನಿಕರಿಗೆ ಆಜ್ಞೆ ನೀಡುವ ಸೇನಾಪತಿಯಂತಿತ್ತು

''ಮುಂಬಯಿಗೆ ನೀವು ಎಂದು ತೆರಳಿದಿರಿ?''

''ಸುಮಾರು ೭-೮ ದಿನಗಳ ಹಿಂದೆ.

''ಕಾರಣ''

''ಪ್ರಾಯವ್ಹೇಟ ಕೆಲಸದ ಮೂಲಕ."

—''ಇಲ್ಲದ ಉಪದ್ವ್ಯಾಪ ನಿಮಗೇಕೆ ಎಂಬಂತಿತ್ತು ಅವನ ಕಂಗ ಗಳಲ್ಲಿಯ, ಮುಖದಲ್ಲಿಯ ಭಾವ.

"ಮಿ. ಶೇಖರ ನಿಮಗೆ ನಿಮ್ಮ ತಂದೆಯವರನ್ನು ಭೆಟ್ಟಿಯಾಗಲು ಬರುತ್ತಿದ್ದವರ ಪರಿಚಯವಿದೆಯೇ?''

"ನಮ್ಮ ತಂದೆಯವರಿಗೆ ಯಾವ ಮಿತ್ರರಿದ್ದರೆಂಬುದನ್ನು ಕಾಣೆ.'' —ಶೇಖರ ಚುಟುಕಿನಲ್ಲಿ ಉತ್ತರ ಹೇಳಿದ.

"ನಿಮಗೆ ಹೊಸವಿಲ್ಲಿನ ವಿವರವೇನಾದರೂ ತಿಳಿದಿದೆಯೇ?"

"ತಿಳಿದಿದೆ. ತಂದೆಯವರ ಕ್ರೂರತನದ ಅರಿವು ಸಹ ಆಗಿದೆ. ಮುದುಕ ಸಾಯುವಾಗಲೂ ಸುಖವನ್ನು ಕೊಟ್ಟು ಸಾಯಲಿಲ್ಲ. ಇದ್ದಾಗಲೂ ಸಹ ಯಾವ ಸುಖವು ದೊರೆಯಲಿಲ್ಲ.

—ಅವನ ಧ್ವನಿ ಅಸಮಾಧಾನದ, ಕ್ರೋಧದ ಕಿಡಿಯನ್ನು ಕಾರುತ್ತಿತ್ತು.

"ನಿಮ್ಮ ಅಕ್ಕನ ಮಗಳನ್ನು ನೋಡಿದಿರಾ?''

ನೋಡಿ ಏನು ಮಾಡುವದು ಬಿಡಿ ಇನ್ಸಪೆಕ್ಟರ. She is a lucky girl. ನಮ್ಮದೆ ದುರ್ದೈವ. ಇನ್ನು ಮುಂದೆ ನಾವು ಅವಳ ಆಶ್ರಯದಲ್ಲಿರಬೇಕಾಗಿ ಬಂತು."

—ದೀರ್ಘವಾದ ನಿಟ್ಟುಸಿರೊಂದು ಅವನಿಂದ ಹೊರಬಂದಿತು.

"ಮಿ. ಶೇಖರ ನೀವು ಮುಂಬಯಿಯಲ್ಲಿ ಯಾರ ಮನೆಯಲ್ಲಿ ಅಥವಾ ಹೋಟಲಿನಲ್ಲಿ ಇಳಿದುಕೊಂಡಿದ್ದಿರಿ." ಶ್ರೀಧರ ಸೂಕ್ಷ್ಮವಾಗಿ ಅವನನ್ನೇ ನೋಡುತ್ತ ಕೇಳಿದ.

ಶೇಖರ ಒಂದೆರಡು ಕ್ಷಣ ಅನುಮಾನಿಸಿ ನುಡಿದ—

"ನನ್ನ ಮಿತ್ರನೊಬ್ಬನ ಮನೆಯಲ್ಲಿದ್ದುಕೊಂಡಿದ್ದೆ. ಯಾಕೆ ನಿಮಗೆ ನನ್ನ ಪಯಣದ ಬಗ್ಗೆ ಅನುಮಾನವೇನಾದರೂ........" ಅರ್ಧದಲ್ಲಿ ಧ್ವನಿ ತಡೆಯಿತು.

"ಹಾಗೇನಿಲ್ಲ. ನಿನ್ನೆ ರಾತ್ರಿಯೇ ನಿಮ್ಮಲ್ಲಿಗೆ ಬಂದದ್ದು.''

"ಹೌದು ನಿನ್ನೆ ರಾತ್ರಿ." ಅವನ ಮೇಲೆ ಸ್ವಲ್ಪ ವಿವರ್ಣವಾಗಿ ಮತ್ತೆ ನಿರ್ವಿಕಾರವಾಯಿತು.

"ನಿಮ್ಮ ತಂದೆಯವರು ಮನೆಯಲ್ಲಿಟ್ಟ ಚಿನ್ನದ ಘಟ್ಟಗಳು ಕಳುವಾಗಿವೆಯಂತೆ. ಅದರ ವಿಷಯ ನಿಮಗೆ ತಿಳಿದಿದೆಯೇ?"

''ಬಂಗಾರದ ಘಟ್ಟಿಗಳು ಕಳುವಾಗಿವೆ! ನಿಜವಾಗಿ ಆ ಸಂಗತಿ ನನಗೆ ತಿಳಿದಿರಲೆ ಇಲ್ಲ. ಈ ವಿಷಯ ನಮ್ಮ ತಂದೆಯವರ ಹೊರತಾಗಿ ಅನ್ಯರಾರಿಗೂ ತಿಳಿದಂತೆ ಕಾಣುವದಿಲ್ಲ."

''ನೀವಿನ್ನು ಹೋಗಲಡ್ಡಿಯಿಲ್ಲ ಶೇಖರ.'' ಶ್ರೀಧರ ಅವನು ನಿರ್ಗಮಿಸಲು ಆಜ್ಞೆಯನ್ನಿತ್ತು ತಾನು ಯೋಚನಾಧೀನನಾದ. ಜೋಸೆಫರು ಅವನ ಯೋಚನೆಯನ್ನು ಅರ್ಧದಲ್ಲಿಯೆ ತುಂಡರಿಸುತ್ತ—

''ಆಸಾಮಿ ಸ್ವಲ್ಪ ಒರಟನೆಂದು ಕಾಣುತ್ತದೆ.''

''ನನಗೂ ಹಾಗೆಯೇ ಕಾಣುತ್ತದೆ. ಅವನು ಮಾತನಾಡುವ ರೀತಿ ನೋಡಿದರೆ ಯಾವದೋ ಸಂಗತಿಯನ್ನು ಅವನು ನಮ್ಮಿಂದ ಬಚ್ಚಿಡಲು ಪ್ರಯತ್ನಿಸುತ್ತಿದ್ದಾನೆ.

ಶ್ರೀಧರ ಸೆಂಟ್ರಲ್‌ರೋಡಿನ ಅಂಚನ್ನು ತಲುಪಿದಾಗ ಅವನಿಗೆ ಲಾಂಡ್ರಿಯ ಭವ್ಯವಾದ ಬೋರ್ಡು ಕಾಣಿಸಿತು. ಇಲೆಕ್ಟ್ರಿಕ್ ದೀಪಗಳ ಜಾಜ್ವಲ್ಯಮಾನವಾದ ಪ್ರಕಾಶದಲ್ಲಿ ಹೊರಗೆ ಕಾಜಿನ ಬಿರುವಿನಲ್ಲಿ ವಿವಿಧ ತರಹದ ರೇಶಿಮೆಯ, ಉಲನ್ನದ ಪ್ಯಾಂಟುಗಳನ್ನು, ಕೋಟುಗಳನ್ನು ತೂಗಹಾಕಲಾಗಿತ್ತು. ಗಾಳಿಯಲ್ಲಿ ರೆಡಿಯೋದಿಂದ ಮಂಜುಳ ಧ್ವನಿಯೊಂದು ತೇಲಿ ಬರುತ್ತಿತ್ತು. ಲಾಂಡ್ರಿಯ ಯಜಮಾನ ಯಾವದೋ ಅರಿವೆಗಳನ್ನು ಪ್ಯಾಕು ಮಾಡುತ್ತ ಕುಳಿತುಕೊಂಡಿದ್ದ. ಯುನಿಫಾರ್ಮಿನಲ್ಲಿದ್ದ ಇನಸ್ಪೆಕ್ಟರರನ್ನು ಕಂಡು ಭಯದಿಂದ ಅಸ್ತವ್ಯಸ್ತವಾಗಿದ್ದರೂ ಧೈರ್ಯ ತಾಳುತ್ತಿದ್ದ ಅವನ ಮನ, ಕ್ರೂರವಾದ ವ್ಯಾಘ್ರದ ಬೋನಿನಲ್ಲಿ ಬಿದ್ದ ಅಸಹಾಯ ಮಾನವ ಅದರ ಕಠೋರ ನಖಗಳಿಗೆ ಆಹುತಿಯಾಗುವಂತೆ ಬೆದರಿಕೆಗೆ ಬಲಿಯಾಗಿತ್ತು. ಅಶ್ವತ್ಥರಾಯರ ಕೊಲೆ ಸುದ್ದಿ ಅವನಿಗೂ ತಿಳಿದಿತ್ತು. ತನ್ನ ಮೇಲೆ ಯಾವ ಗಂಡಾಂತರ ಕಾದಿದೆಯೋ ಎಂದು ಅವನು ಕಂಗಾಲಾದ.

''ಅಶ್ವತ್ಥರಾಯರ ವಾಶರಮನ್ ನೀನೇ ಅಲ್ಲವೇ."

''ಹೌದು ಸ್ವಾಮಿ." ಗಂಟಲು ಒಣಗಿ ಧ್ವನಿಯು ಹೊರಬಂದಂತಾಗಿತ್ತು. ಆದರೂ ಇದ್ದುದ್ದರಲ್ಲಿಯೆ ಧೈರ್ಯವನ್ನು ತಾಳಿ ಒಳಗೆ ದಯಮಾಡಿಸಬೇಕು ಸ್ವಾಮಿ. ಹಾಗೆಯೆ ಹೊರಗೆಯೆ ನಿಂತಿದ್ದರಲ್ಲಾ." ಎಂದು ಆಹ್ವಾನಿಸಿದ. ಶ್ರೀಧರನಿಗೂ ಹೆಚ್ಚಿಗೆ ಮಾತನಾಡಬೇಕಾದುದರಿಂದ

ಅವನ ಕರೆಗೆ ಮನ್ನಣೆ ಕೊಟ್ಟು ಒಳಗೆ ಪ್ರವೇಶಿಸಿದ. ತನ್ನ ಸೇವಕನೊಬ್ಬನಿಗೆ ಕಾಫಿಗೆ ಆರ್ಡರು ಮಾಡಲು ಹೇಳಿ ಯಜಮಾನ ಶ್ರೀಧರನೆಡೆಗೆ ತಿರುಗಿದ.

"ನಿನ್ನ ಹೆಸರೇನಯ್ಯಾ?"

'ಮುನಿಸ್ವಾಮಪ್ಪ ಸ್ವಾಮಿ."

"ಮುನಿಸ್ವಾಮಿ ಅಶ್ವತ್ಥರಾಯರ ಅರಿವೆಗಳನ್ನು ವಾಶ ಮಾಡಲು ಪ್ರಾರಂಭಿಸಿ ಎಷ್ಟು ದಿನಗಳಾದವು?"

"ಸುಮಾರು ಐದಾರು ವರ್ಷಗಳು ಆದವು ಸ್ವಾಮಿ."

"ಅಂದಿನಿಂದ ಅವರ ಪರಿಚಯವಿದೆಯೇ ನಿನಗೆ?"

"ಹೌದು ಅಶ್ವತ್ಥರಾಯರು ಬಹಳ ಒಳ್ಳೆಯ ಮನುಷ್ಯರು"

"ಅವರ ಮಕ್ಕಳ ಅರಿವೆಗಳೇನಾದರೂ ನಿನ್ನೆಡೆಗೆ ಬರುತ್ತವೇನು?"

"ಅವರ ಮಕ್ಕಳ ಅರಿವೆಗಳಾದರೂ ನನ್ನ ಹತ್ತಿರವೆ ಬರುತ್ತವೆ.'

"ಅವರಲ್ಲಿ ಹೆಚ್ಚು ಬೆಲೆಯ ಅರಿವೆಗಳನ್ನು ಹಾಕುವವರು ಯಾರು? ಚಿಕ್ಕ ಯಜಮಾನರೋ ಅಥವಾ ದೊಡ್ಡ ಯಜಮಾನರೋ?

"ಚಿಕ್ಕ ಯಜಮಾನರು ಅಂದರೆ ಶೇಖರಪ್ನೋರೆ ಹೆಚ್ಚಿಗೆ ಅರಿವೆಗಳನ್ನು ಹೊಲಿಸಿದ್ದಾರೆ. ಅವರ ಅರಿವೆಗಳೆ ಹೆಚ್ಚಾಗಿ ಬರುತ್ತವೆ."

"ಮುನಿಸ್ವಾಮಿ ಇವರಿಬ್ಬರಲ್ಲಿ ಯಾರದಾದರೂ ಕೆಂಪು ಕೋಟು ಅಥವಾ ಶರ್ಟು ಇದೆಯೋ?"

—ಶ್ರೀಧರ ನೇರವಾಗಿ ಅವನನ್ನೀಕ್ಷಿಸುತ್ತಾ ಕೇಳಿದ.

"ಕೆಂಪು ಬಟ್ಟೆ ಅದಿರುವಂತೆ ಕಾಣೆ."

"ಚನ್ನಾಗಿ ಯೋಚಿಸಿ ಹೇಳು ಮುನಿಸ್ವಾಮಿ"–ಶ್ರೀಧರ ಮತ್ತೊಮ್ಮೆ ಯೋಚಿಸಲು ಸೂಚಿಸಿದ.ಮುನಿಸ್ವಾಮಿಯಮನ ಸ್ವಲ್ಪ ಹೊತ್ತು ವಿಚಾರದ ಸುಳಿಯಲ್ಲಿ ಸಿಲುಕಿತು. ಒಮ್ಮೆಲೆ ಅವನು—

"ಹಾಂ ದೊಡ್ಡ ಯಜಮಾನರ ಒಂದು ಕೆಂಪು ಬುಶಶರ್ಟದೆ. ಈಗ ಹತ್ತು ಹನ್ನೆರಡು ದಿನಗಳ ಹಿಂದೆಯೆ ಅದನ್ನು ತೆಗೆದುಕೊಂಡು ಹೋದರು."

"ದೊಡ್ಡ ಒಡೆಯರೆಂದರೆ ನಾರಾಯಣನಲ್ಲವೇ?"

"ಹೌದು ನಾರಾಯಣಪ್ಪನದು ಆ ಬುಶಶರ್ಟು."

"೧೫ ದಿನಗಳ ಹಿಂದೆಯೆ ಅದನ್ನವರು ತೆಗೆದುಕೊಂಡದ್ದು ನಿಶ್ಚಿತವಾಗಿ ಹೇಳು ಮುನಿಸ್ವಾಮಿ."

"ನಿಜವಾಗಿ ಸ್ವಾಮಿ ೧೫ ದಿನಗಳ ಹಿಂದೆ ಅದನ್ನವರು ಒಯ್ದರು."

"ಶ್ರೀಧರ ಮುನಿಸ್ವಾಮಿಯಿತ್ತ ಕಾಫಿಯನ್ನು ಸೇವಿಸಿ ಅಂಗಡಿಯನ್ನು ತ್ಯಜಿಸಿದ. ಶ್ರೀಧರ ಸೇದುತ್ತಿದ್ದ ಸಿಗರೇಟಿನ ಧೂಮತರಂಗಗಳು ಹವೆಯನ್ನು ವ್ಯಾಪಿಸಿದಂತೆ ಅವನ ಮನಸ್ಸಿಗೆ ವಿಚಾರವಲೆಗಳು ಆವರಿಸಿದ್ದವು. ಕೆಂಪು ಅರಿವೆಯಂತು ನಾರಾಯಣನದು ಆ ರೀತಿಯಾಗಿ ಇನ್ನೊಬ್ಬರು ಕೆಂಪು ಬಟ್ಟೆಯನ್ನು ಧರಿಸಿರಬಹುದು. ಕೊಲೆಯಾದ ರಾತ್ರಿ ನಾರಾಯಣ ಥೇಟರಿನಲ್ಲಿದ್ದ. ತಾನು ಅಲ್ಲಿದ್ದನೆಂದು ಅವನು ವಿಶ್ವಾಸಪೂರ್ವಕವಾಗಿ ನುಡಿಯುತ್ತಾನೆ. ನಡುವೆ ಎದ್ದು ಬಂದು ಕೊಲೆ ಮಾಡಿ ಹೋಗಲು ಅವನಿಗೆ ಅವಕಾಶವಿತ್ತು. ಆದರೂ ಅವನು ಅಲ್ಲಿದ್ದನೇ ಇಲ್ಲ ಎಂಬ ಬಗೆಗೆ ಖಚಿತವಾದ ಸುದ್ದಿಯನ್ನು ದೊರಕಿಸಬೇಕು.

ಸಂಜೆಯ.ಆರು ಗಂಟೆಗೆ ಶ್ರೀಧರ ರೆಕ್ಸಟಾಕೀಜನ್ನು ತಲುಪಿದ. ಅಂದು ವಿಶೇಷ ಗದ್ದಲವಿರಲಿಲ್ಲ. ಆಳಿನ ಕೈಯಲ್ಲಿ ತನ್ನ ವಿಜಿಟಿಂಗ ಕಾರ್ಡನ್ನು ಕೊಟ್ಟು ಮ್ಯಾನೇಜರರ ರೂಮಿಗೆ ಕಳುಹಿದ. ಕೂಡಲೆ ಅವನಿಗೆ ಕರೆಬಂತು. ಝುಗಝುಗಿಸುವ ದೀಪಗಳಿಂದ ಮ್ಯಾನೇಜರರ ವಿಶಾಲವಾದ ಆಫೀಸು ಕಂಗೊಳಿಸುತ್ತಿತ್ತು.ಹಸಿರು ಬಣ್ಣದ ಮ್ಯಾಟನ್ನು ನೆಲಕ್ಕೆ ಹೊದಿಸಲಾಗಿತ್ತು. ನಾಲ್ಕೈದು ಫ್ಯಾನುಗಳು ಹವೆಯನ್ನು ಕತ್ತರಿಸಿ ತಿರುಗುತ್ತಿದ್ದವು. ಮ್ಯಾನೇಜರ ಇವನನ್ನು ಕಂಡು ಮುಗುಳ್ನಗೆಯಿಂದ ಸ್ವಾಗತ ಬೀರಿದ, "ಏನೋ ಅಪರೂಪವಾಗಿ ಇತ್ತ ಕಡೆ ಬಂದಿರುವಿರಿ."

"ನಿಮ್ಮ ಹತ್ತರ ಅರ್ಜಂಟ ಕೆಲಸವಿದ್ದುದರಿಂದಲೇ ಬರಬೇಕಾಯಿತು. ಅಶ್ವತ್ಥರಾಯರ ಕೊಲೆಯಾದ ರಾತ್ರಿ ನಿಮ್ಮ ಟಾಕೀಜಿಗೆ ಅವರ ಮಗ ನಾರಾಯಣ 'War and Peace' ಪಿಕ್ಚರ ನೋಡಲು ಬಂದಿದ್ದನಂತೆ ಅದು ನಿಜವೇನು?"

—ಶ್ರೀಧರ ನೇರವಾಗಿ ವಿಷಯವನ್ನು ಪ್ರಸ್ತಾಪಿಸಿದ. ಮ್ಯಾನೇಜರ ಅವನು ಬಂದದ್ದು ತಾವು ನೋಡಿದ್ದೆವೆಂದು ಹೇಳಿದರು. ಅಂದು ಅವನು ನಡುವೆ ಎದ್ದು ಹೋದುದು ತಮಗೆ ತಿಳಿಯದೆಂದರು. ಅಂದು ಇದ್ದ ಗೇಟಕೀಪರನನ್ನು ಕರೆಯಲು ಕಳುಹಿದರು. ೧೫ ನಿಮಿಷಗಳು ಕಳೆದ

ಮೇಲೆ ರಹೀಮನೆಂಬವನು ಅಂದು ಗೇಟಕೀಪರನಿದ್ದನೆಂದು ತಿಳಿಯಿತು. ಶ್ರೀಧರ ಅವನನ್ನು ಕರೆಯಲು ಕಳುಹಿವ ರಹೀಮ ಬಂದ ಮೇಲೆ ನಾರಾಯಣನೇನಾದರೂ ನಡುವೆ ಎದ್ದು ಹೋದ ಬಗ್ಗೆ ವಿಚಾರಿಸಿದ ರಹೀಮ ಅವನ ಮಾತಿಗೆ ನಾರಾಯಣ ಒಳಗೆ ಬಂದವನು ಎಲ್ಲಿಗೂ ಹೋಗಲಿಲ್ಲವೆಂದು ಬಿಟ್ಟ ಮೇಲೆಯೇ ಸುಮಾರು ೯-೨೦ ಕ್ಕೊ ಅಥವಾ ೯-೩೦ಕ್ಕೊ ಹೋದುದುದಾಗಿ ಹೇಳಿದ. ಶ್ರೀಧರ ಮತ್ತೆ ಮತ್ತೆ ಕೇಳಿದರೂ ಅದು ತನಗೆ ಖಚಿತವಾಗಿ ಗೊತ್ತಿದೆಯೆಂದು ತಿಳುಹಿದ. ಶ್ರೀಧರನಿಗೆ ನಿರಾಶೆಯಾದಂತಾಯಿತು. ಮ್ಯಾನೇಜರರಿಗೆ ತನ್ನ ನಮಸ್ಕಾರ ಸಲ್ಲಿಸಿ ಕಾರಿನೆಡೆಗೆ ತೆರಳಿವ. ಈ ರಹೀಮನನ್ನು ಎಲ್ಲಿಯೋ ನೋಡಿದ ನೆನಪು ಮಸಕು ಮಸಕಾಗಿ ಮಂಜಿನೆಂದಾಚ್ಛಾದಿತವಾದ ವಿದ್ಯುದ್ದೀಪದಂತೆ ಕಾಣುತ್ತಿತ್ತು. ಆದರೆ ಎಲ್ಲಿ ಎಂಬುದು ಅವನ ಅರಿವಿಗೆ ಎಟುಕದ ಸಂಗತಿಯಾಯಿತು. ಕಾರನ್ನು ಸ್ಟಾರ್ಟ ಮಾಡುತ್ತಿದ್ದ ಶ್ರೀಧರ ತಿರುಗಿ ಮೇನೇಜರರ ಆಫೀಸನ್ನು ತಲುಪಿದ. ಅವನನ್ನು ನೋಡಿ ಅವರಿಗೆ ವಿಸ್ಮಯವಾಯಿತೆಂದು ಕಾಣುತ್ತದೆ. ಅವರಿಂದ ರಹೀಮನ ಅಡ್ರೆಸ್ಸು ಪಡೆದು ಪೋಲೀಸಸ್ಟೇಶನನ್ನು ತಲುಪಿದ. ಹಳೆಯ ಎಲ್ಲ ರೆಕಾರ್ಡುಗಳ ಧೂಳು ಝಾಡಿಸಿದ. ಸುಮಾರು ನಾಲ್ಕು ಅಥವಾ ಐದು ವರ್ಷಗಳ ಕೆಳಗೆ ಅವನು ಅದೆ ಇನಸ್ಪೆಕ್ಟರನಾಗಿ ಅಧಿಕಾರಕ್ಕೆ ಬಂದಿದ್ದ. ಆಗ ಈ ರಹೀಮನ ಕೇಸು ಬಂದಿತ್ತು. ಯಾವದೊಂದು ಹೆಂಗಸಿನ ಆಭರಣಗಳನ್ನು ಅಪಹರಿಸಿಕೊಂಡು ಫರಾರಿಯಾಗಿದ್ದ. ಆ ಅಪರಾಧಕ್ಕಾಗಿ ಅವನಿಗೆ ಆರು ತಿಂಗಳ ಶಿಕ್ಷೆಯಾಯಿತು. ಅದೇ ವ್ಯಕ್ತಿ ಇವನೆಂಬುವರಲ್ಲಿ ಶ್ರೀಧರನಿಗೆ ಸಂದೇಹವುಳಿಯಲಿಲ್ಲ. ರಹೀಮ ಇಂದು ಹೇಳಿದ ವಿಶ್ವಾಸಪೂರ್ವಕವಾದ ಹೇಳಿಕೆಯ ನೆರಳಿನಲ್ಲಿ ಸುಳ್ಳು ಅಡಗಿದ್ದುದು ಶ್ರೀಧರನಿಗೆ ತಿಳಿಯಿತು. ನಾಳೆ ಅವನಿಗೆ ಬಿಸಿಯನ್ನು ಮುಟ್ಟಿಸಿ ವಿಷಯವನ್ನು ಬಾಯಿಬಿಡಿಸಬೇಕೆಂದ.

ರವಿಯ ಸ್ವರ್ಣಮಯ ರಶ್ಮಿಗಳು ಕಂಗೊಳಿಸುತ್ತ ಎಲ್ಲ ವಸ್ತುಗಳಿಗೆ ಒಂದು ನವ್ಯೋನವವಾದ ರೂಪವನ್ನು ಕೊಟ್ಟಿದ್ದವು. ಎಳೆಯ ಬಿಸಿಲನ್ನು ಬೀರಿ ಹೊಂದರನ್ನೇರಿ ಸೂರ್ಯ ಹೊಳೆಯುತ್ತ ಕುಲುಕುಲು ಎಂದು ಚೆಲುವಿನ ನಗುವನ್ನು ಹೊರಸೂಸುತ್ತ ಏರಿ ಬರುತ್ತಿದ್ದ. ಜನ ಆಲಸ್ಯವನ್ನು ಹೊಡೆದೋಡಿಸುತ್ತ ಜಗದ ಮೌನವನ್ನು ಮುರಿಯುಲು, ಮುಂಬಿಗಳಿಗೆ ಆಹಾರವಾದ ಸುಂದರ ಪುಷ್ಪಗಳನ್ನು ಉನ್ಮೀಲಿತವಾಗಿ ಮಾಡುತ್ತ ರನ್ನ ಕಿರೀಟದ ದಿನಕರ ಬರುತ್ತಿದ್ದ. ಪಿಕದ ಮೃದು ಮಧುರವಾದ ಉಲಿಯಿಂದ ಅರುಣೋದಯದ ಬಿಸಿಯಾದ ಕಿರಣಗಳು ಮೈಮೇಲೆ ಬಿದ್ದುದರಿಂದ ಶ್ರೀಧರನಿಗೆ ಎಚ್ಚರವಾಯಿತು. ಯಾವ ಯೋಚನೆಯು ಇಲ್ಲದೆ ನಿರ್ಲಿಪ್ತನಾಗಿ ಮಲಗಿದ ಶ್ರೀಧರ ಮನಸ್ಸು ಯಾಂತ್ರಿಕವಾಗಿ ಯೋಚನೆಗಳಲ್ಲಿ ಲೀನವಾಯಿತು. ಶ್ರೀಧರ ನಿದ್ರೆಯಲ್ಲಿದ್ದ ಅವಸ್ಥೆಯನ್ನು ನೆನೆಸಿಕೊಂಡ. ಮನುಷ್ಯ ಆಗ ಯಾವ ಸ್ಥಿತಿಯಲ್ಲಿರಬಹುದು. ಸುಮುಪ್ತಾವಸ್ಥೆಯಲ್ಲಿ ಆತ್ಮ ತನ್ನನ್ನು ಕುರಿತು ವಿಚಾರಿಸುವದಂತೆ. ಅಲ್ಲಿ ಅದೆ ವಿಚಾರದ ವಸ್ತು, ಅದೆ ವಿಚಾರ ಮಾಡುವದು ತನ್ನನ್ನು ಕುರಿತು. ಆ ಸ್ಥಿತಿಯಲ್ಲಿ ಮನಸ್ಸನ್ನು ಕಂಗೆಡಿಸುವ ಯಾವ ವಿಧವಾದ ದಾರುಣ ವ್ಯಥೆಯಿಲ್ಲ; ಸುಖ ಸಂತೋಷಗಳಿಂದ, ಅಲ್ಪ ಸಂತೃಪ್ತಿಗಳಿಂದ ತೃಪ್ತಿಯಾಗುವ ಸನ್ನಿವೇಷವಿಲ್ಲ. ಇಂಥ ಕಾರ್ಯಗಳನ್ನು ಮಾಡಿಯೇ ತೀರಬೇಕೆಂಬ ನಿರ್ಧಾರವಿಲ್ಲ. ಅವ್ಯಕ್ತ ಸ್ಥಿತಿಯದು, ಏನೆಂದು ಮಾನವ ಭಾಷೆ ವರ್ಣಿಸುವದು ಅಸಾಧ್ಯ. ಮಾನವನ ಅರಿವಿಗೆ ಸಿಲುಕದ ವಿಷಯವದು. ತತ್ವಜ್ಞಾನದ ವಿಷಯದೆಡೆಗೆ ಹೊರಳಿದ ತನ್ನ ಚಿತ್ತವನ್ನು ಕಂಡು ಶ್ರೀಧರನಿಗೆ ನಗು ಉಕ್ಕಿ ಬಂದಿತು. ಯಾವ ಆತ್ಮ ಏನು ಮಾಡುತ್ತಿದ್ದರೇನು? ತಮ್ಮ ಆತ್ಮ ಯಾವಾಗಲೂ ಕೊಲೆಗಾರರ ಹಿಂದೆ ಇರುವವಂತು ನಿಜಸಂಗತಿ. ಶ್ರೀಧರ ಎಂದಿನಂತೆ ತನ್ನ ಮುಂಜಾವಿನ ದಿನಚರಿಯಲ್ಲಿ ಮಗ್ನನಾದ. ಒಂಬತ್ತುಗಂಟೆಗೆ ಸಾಧಾರಣವಾದ ಡ್ರೆಸ್ಸನ್ನು ಮಾಡಿಕೊಂಡು ರಹೀಮನ ವಿಚಾರಣೆಗಾಗಿ

ಹೊರಬಿದ್ದ. ರಹೀಮ ಇರುವ ಸ್ಥಳ ಊರಿನಿಂದ ೨ ಮೈಲು ದೂರ ವಾಗಿತ್ತು. ಶ್ರೀಧರ ನಡೆದುಕೊಂಡೇ ಹೊರಟ. ಅಸಹ್ಯವಾದ ಕೂಲಿಕಾರರ ಓಣಿ ಅನೇಕ ಮನೆಗಳು. ಮನೆಗಳೆನ್ನುವದಕ್ಕಿಂತಲೂ ಗುಡಿಸಲುಗಳು. ಅವುಗಳಿಗೆ ತಗಡಿನ ಮೇಲ್ಛಾವಣಿ ಎಡಬಲದಲ್ಲಿ ಹೊಲಸಿನ ರಾಶಿ. ನರಕ ಸದೃಶವಾದ ಇಂಥ ಓಣಿಯಲ್ಲಿ ಜನರು ಯಾವ ಬಗೆಯ ಮನೋವಿಕಾರ ಕ್ಕೆಡೆಗೊಡದೆ ಯಾಂತ್ರಿಕ ಜೀವನವನ್ನು ಹಿಂದಿನಿಂದ ಸಾಗಿಸಿಕೊಂಡು ಬಂದಿದ್ದರು, ಈಗಾದರೂ ಸಾಗಿಸಿದ್ದರು. ಶ್ರೀಧರನಿಗೆ ಅಲ್ಲಿಂದ ಹೋಗಲು ಅಸಹ್ಯವೆನಿಸಿದರೂ ಕರ್ತವ್ಯ ನಿರ್ವಹಣೆ ಅವನನ್ನು ಮುಂದೆ ಮುಂದೆ ತಳ್ಳುತ್ತಿತ್ತು. ಕಟ್ಟಕಡೆಗೆ ಒಂದು ವಿಶಾಲವಾದ ಕಟ್ಟಡವಿತ್ತು. ಕಟ್ಟಡ ಸುತ್ತುಮುತ್ತಲಿನ ವಾತಾವರಣ ನಿರ್ಮಲವಾಗಿತ್ತು. ಬಾಡಿಗೆಗಾಗಿ ಕಟ್ಟಿ ಸಿದ ಅನೇಕ ರೂಮುಗಳಿದ್ದವು. ಶ್ರೀಧರ ಮೆಟ್ಟಲುಗಳನ್ನೇರಿ ಮೇಲೆ ಹೋದ. ಎಡಬಲದಲ್ಲಿ ಅನೇಕ ಕೋಣೆಗಳಿದ್ದವು. ಎಡಬದಿಯಲ್ಲಿರುವ ಮೂರನೆಯ ಕೋಣೆಯೆ ರಹೀಮನ ಕೋಣೆ. ಬಾಗಿಲಿಗೆ ಕೊಂಡಿಯನ್ನು ಹಾಕಿರಲಿಲ್ಲ. ಶ್ರೀಧರ ಎರಡು ಮೂರುಸಲ ಬಾಗಿಲನ್ನು ತಟ್ಟಿದ. ಆಗ ಒಳಗಿನಿಂದ ಬಿರುಸಾದ ಧ್ವನಿಯೊಂದು "ಯಾರೋ ಅವನು" ಎಂದಿತು. ಸಿಗರೇಟನ್ನು ಬಾಯಲ್ಲಿಟ್ಟುಕೊಂಡು ರಹೀಮ ಬಂದು ಬಾಗಿಲನ್ನು ತೆರೆದ. ಶ್ರೀಧರನನ್ನು ನೋಡಿ ಅವನ ಮೋರೆ ಕಪ್ಪಿಟ್ಟಿತು. ಆದರೂ ವಿಕಾರರಹಿತ ಭಾವದಿಂದ "ಯಾಕೆ ಸ್ವಾಮಿ ಏನು ಕೆಲಸ'' ಎಂದು ಒರಟಾಗಿಯೇ ಕೇಳಿದ.

"ಒಳಗೆ ನಡಿ ಆ ಮೇಲೆ ಎಲ್ಲಾ ತಿಳಿಯುವದು" ಎಂದು ಶ್ರೀಧರ ಅವನನ್ನು ದೂಡಿಕೊಂಡು ಒಳಗೆ ಪ್ರವೇಶ ಮಾಡಿದ. ಒಳಗೆಲ್ಲ ಕೊಳಕು ತುಂಬಿತ್ತು. ಅಲ್ಲಿಯೇ ಇದ್ದ ಒಂದು ಮುರುಕು ಖುರ್ಚಿಯಮೇಲೆ ಕುಳಿತು ಕೊಂಡ. ರಹೀಮ ಹಾಸಿಗೆಯ ಮೇಲೆ ಕುಳಿತುಕೊಂಡು ಇನ್ಸಪೆಕ್ಟರನ್ನು ಉರಿಗಾರುವ ಕಣ್ಣುಗಳಿಂದ ನೋಡಿದ.

"ನೀನಿನ್ನು ಮೊದಲಿನ ಹುಡುಗಾಟ ಬಿಟ್ಟಂತೆ ಕಾಣಲಿಲ್ಲ.''

—ಶ್ರೀಧರ ಅವನನ್ನು ತೀಕ್ಷ್ಣವಾಗಿ ನೋಡಿದ.

"ಯಾಕೆ ಇನ್ಸಪೆಕ್ಟರ. ನಾನೇನು ಮಾಡಿದ್ದೇನೆ. ಈ ಸಲ ನೆಮ್ಮದಿ

ಯಾಗಿರಬೇಕೆಂದರೆ ನಿಮ್ಮ ಪೋಲೀಸಿನವರ ಕಾಟ ಪದೆ ಪದೆ ಎಂದು ಸಿಟಿದು ಮಾತನಾಡಿದ.

"ನಾಲಿಗೆ ಬಿಗಿ ಹಿಡಿದು ಮಾತಾಡು. ನಿನ್ನನ್ನು ಮೊದಲಿಸಿಂದಲೂ ನಾನು ಒಲ್ಲೆ. ನಿಮ್ಮ ಒಡೆಯರಿಂದ ಎಷ್ಟು ಹಣ ತೆಗೆನುಕೊಂಡೆ ಈ ಸಲ."

– ಶ್ರೀಧರನ ಧ್ವನಿಯಲ್ಲಿ ಆಜ್ಞೆಯ ಬಿರುಸುತನ ತೋರುತ್ತಿತ್ತು.

"ಯಾವ ಒಡೆಯ ಸ್ವಾಮಿ. ನೀವು ಉದ್ದೇಶಪೂರ್ವಕವಾಗಿಯೇ ತಪ್ಪು ಹೊರಿಸಲು ಬಂದಂತೆ ಕಾಣುತ್ತದೆ.''

"ನಾರಾಯಣ ನಿಮ್ಮ ಒಡೆಯನೆಂದರೆ. ನಿಜ ಹೇಳು ಈ ವ್ಯವಹಾರ ದಲ್ಲಿ ಎಷ್ಟು ಹಣ ತಿಂದೆ. ಇಲ್ಲದಿದ್ದರೆ ಮತ್ತೆ ಕಾಣಬೇಕಾದೀತು.''

"ಬೆದರಿಸಿದರೆ ನಾನು ಹೇಳುತ್ತೇನೆಂದುಕೊಂಡಿರಾ. ಅವನ್ನೆಲ್ಲ ಕಟ್ಟಿಟ್ಟುಬಿಡಿ. ನನಗೂ ರೂಲ್ಸು ಗೊತ್ತಿದೆ.''

"ರಹೀಮ ನನ್ನೆದುರಿಗೆ ನೀನು ತಪ್ಪಿಸಿಕೊಳ್ಳುವದು ಸಾಧ್ಯವಿಲ್ಲ. ಇಲ್ಲದೆಲ್ಲಾ ಬೊಗಳಬೇಡ ರ್‍ಯಾಸ್ಕಲ್. ನಿಜ ಬೊಗಳುತ್ತಿಯೋ ಅಥವಾ ಸ್ಟೇಶನ್ನಿನಲ್ಲಿ ಬಾಯಿಬಿಡಿಸಬೇಕೋ?''

—ಶ್ರೀಧರ ಬೆದರಿಕೆಯ ಕಿಡಿಯೊಂದನ್ನುಗುಳಿದ.

"ಸ್ಟೇಶನ್ನಿನಲ್ಲಿ ನನ್ನ ಬಾಯಿ ಬಿಡಿಸ್ತಿರಾ ಅಥವಾ ನಿಮ್ಮ ಮುಚ್ಚಿಸ ಬೇಕೆ?'' ಎಂದು ಮಗ್ಗುಲಲ್ಲಿದ್ದ ಕಟ್ಟಿಗೆಯ ತುಂಡನ್ನು ರಹೀಮ ಎತ್ತಿ ಕೊಂಡ. ಆಸಾಮಿ ಇಷ್ಟು ಮುಂದುವರೆಯುತ್ತಾನೆಂದು ಶ್ರೀಧರ ತಿಳಿದಿರ ಡಲ್ಲ. ವ್ಯಕ್ತಿ ಜೋರಾಗಿದ್ದಾನೆಂದು ಕಾಣುತ್ತದೆ. ಏನೂ ಆಗದವರಂತೆ

''ಅದೆಲ್ಲಾ ಹುಡುಗಾಟ ಬಿಟ್ಟುಬಿಡು ರಹೀಮ. ನನ್ನನ್ನು ಹೊಡೆದು ನೀನು ಓಡಿಹೋಗಲಾರೆ. ಹೊರಗಡೆ ಪೋಲೀಸ ಕಾವಲಿದೆ. ಇಷ್ಟೆ ಅಲ್ಲದೆ ನಾರಾಯಣನನ್ನು ಹಿಡಿದುಹಾಕಿದ್ದೇನೆ. ಅವನೇ ನಿನ್ನ ಹೆಸರನ್ನು ನನಗೆ ಹೇಳಿದ್ದಾನೆ.''

—ಶ್ರೀಧರನ ಮಾತಿನಿಂದ ರಹೀಮ ಹೆಬ್ಬಾವು ಬಿಗಿದ ಪ್ರಾಣಿಯು ಅದರ ವಜ್ರಹಿಡಿತದಿಂದ ತಪ್ಪಿಸಿಕೊಳ್ಳಲು ತನ್ನ ಸಕಲ ಪ್ರಯತ್ನಗಳನ್ನು, ಸಾಮರ್ಥ್ಯವನ್ನು ಪ್ರಯೋಗಿಸಿ ಕೊನೆಗೆ ನಿರುಪಾಯವಾಗಿ ಸಂಕಟಪಟ್ಟು ತನ್ನ ಜೀವ ಕೊಡುವಂತೆ ತನ್ನ ಅಭಿನಯವನ್ನು ತ್ಯಜಿಸಿದ್ದ.

''ಪಿಕ್ಚರ ನಡೆದಾಗ ನಡುವೆ ಎಷ್ಟು ಗಂಟೆಗೆ ಓಡಿಹೋದ''

''ಸುಮಾರು ೮-೧೦ಕ್ಕೆ ತೆರಳಿ ೯ಕ್ಕೆ ತಿರುಗಿ ಬಂದರು."

''ಅವರು ತಿರುಗಿ ಬಂದಾಗ ಅಂಜಿದ್ದರೋ?"

''ಹೌದು ಅವರ್‍ಯಾರೋ ಗಾಬರಿಯಾಗಿದ್ದರು''

''ಈಗ ಬುದ್ಧಿ ಬಂದಿತೆಂದು ಕಾಣುತ್ತದೆ. ಇರಲಿ ಮತ್ತೊಮ್ಮೆ ನಿನ್ನನ್ನು ಕಾಣುವೆ."

ಶ್ರೀಧರ ಅಲ್ಲಿಂದ ಹೊರಬಿದ್ದು ಅಶ್ವತ್ಥರಾಯರ ಬಂಗಲೆಯನ್ನು ತಲುಪಿದ. ನಾರಾಯಣ ಏನನ್ನೋ ಓದುತ್ತ ಕುಳಿತಿದ್ದನೆಂದು ಕಾಣುತ್ತದೆ. ಅವನು ನಾರಾಯಣನನ್ನು ಅಲ್ಲಿಂದ ಕರೆದುಕೊಂಡು ತೋಟದಲ್ಲಿದ್ದ ಒಂದು ಬೆಂಚಿನ ಮೇಲೆ ಕುಳಿತುಕೊಂಡ ಆ ಸ್ಥಳ ನಿರ್ಜನವಾಗಿತ್ತು. ಯಾರಿಗೂ ಅಲ್ಲಿಯ ಮಾತುಗಳು ಕೇಳುತ್ತಿದ್ದಿಲ್ಲ.

"ಮಿ. ನಾರಾಯಣ,ನೀವು ಅಂದು ಪಿಕ್ಚರಿಗೆ ಹೋಗಿದ್ದು ನಿಜವೋ"

—ಇನ್ಸಪೆಕ್ಟರನ ಸೂಕ್ಷ್ಮ ನಯನಗಳು ಅವನ ಮುಖದ ಮೇಲಿನ ಬದಲಾವಣೆಗಳನ್ನು ನಿರೀಕ್ಷಿಸುತ್ತಿದ್ದವು ಕಂಪಿತ ಧ್ವನಿಯೊಂದಿಗೆ ನಾರಾಯಣ—

''ಯಾಕೆ ಇನ್ಸಪೆಕ್ಟರ ಏನಾದರೂ ಅನುಮಾನ ಬಂದಿದೆಯೋ?''

''ಮಿ. ನಾರಾಯಣ ನಾನು ನಿಮಗೆ ಮೊದಲೆ ವಾರ್ನ ಮಾಡಿದ್ದೇನೆ ನೀವು ನಿಜ ಹೇಳಬೇಕೆಂದು. ಈಗಾದರೂ ಹೇಳುವಿರೋ'' ನಾರಾಯಣ ಒಂದೆರಡು ನಿಮಿಷ ಮಾತನಾಡಲಿಲ್ಲ.

''ನಾನೆಲ್ಲಾ ನಿಜವನ್ನು ಹೇಳಿದ್ದೇನೆ ಇನ್ಸಪೆಕ್ಟರ.''

''ನೀವು ಸುಳ್ಳಾಡುತ್ತಿದ್ದೀರಿ ಅಂದು ಪಿಕ್ಚರ ನಡೆದಾಗ ಅರ್ಧದಲ್ಲಿಯೇ ಎದ್ದು ಹೋಗಿದ್ದೀರಿ.''

—ಶ್ರೀಧರನ ಧ್ವನಿಯಲ್ಲಿ ಬಿರುಸಿತ್ತು, ಕಣ್ಣಿನಲ್ಲಿ ನಾರಾಯಣನ ಹೃದಯವನ್ನು ಹೊಕ್ಕಿರಿಯುವ ನೋಟವಿತ್ತು. ನಾರಾಯಣನ ಮೋರೆ ಕಪ್ಪಿಟ್ಟಿತು. ''ನಾನೆ........ನಾನೆ ಅಂದು ಎಲ್ಲಿಯೂ ಹೋಗಲಿಲ್ಲ" ನಡಗುತ್ತಿದ್ದ ಧ್ವನಿಯಲ್ಲಿ ನುಡಿದ.

"ಇಂಥ ವಿಷಯದಲ್ಲಿ ನಿಮ್ಮ ನಟನೆ ಯಶಸ್ವಿಯಾಗಲಾರದು. ಸತ್ಯವಾಗಿ ಹೇಳಿ ಸುಮಾರು ೮ರಿಂದ ೯ರ ವೇಳೆಯಲ್ಲಿ ಎಲ್ಲಿದ್ದಿರಿ? ಅದೇ ಹೊತ್ತಿನಲ್ಲಿ ಕೊಲೆಯಾಗಿರುವ ವಿಷಯ ಜ್ಞಾಪಕವಿರಲಿ."

ನಾರಾಯಣ ಇನ್ಸಪೆಕ್ಟರರ ಕ್ರೂರ ದೃಷ್ಟಿಯನ್ನು ನೋಡಲಾರದೆ ಅವನತ ಶಿರನಾಗಿ ಕುಳಿತುಕೊಂಡಿದ್ದ. "ಇಂಥ ಸೀರಿಯಸ್ ವಿಷಯದಲ್ಲಿ ಸುಳ್ಳು ಪ್ರಯೋಜನವಿಲ್ಲ. ನೀವು ಕತ್ತಲ ಕೋಣೆಯನ್ನು ಕಾಣಬೇಕಾದೀತು." ನಾರಾಯಣ ನಿಜವಾಗಿಯೂ ಈ ಮಾತಿನಿಂದ ಬೆದರಿದ. ಈ ಸಂಗತಿಯನ್ನು ಇನ್ಸಪೆಕ್ಟರರಿಗೆ ಯಾರು ಹೇಳಿರಬಹುದು? ರಹೀಮ ವಿಶ್ವಾಸಘಾತಕಿಯಾದ ಅವನ ವಿಷಯವಾಗಿ ನಾರಾಯಣನ ಮೋರೆಯ ಮೇಲೆ ಕ್ರೋಧದ ಸೆಳಕೊಂದು ಬೆಳಗಿ ಮಾಯವಾಯಿತು. ಜೇಲಿನ ಭೀತಿ ಕಣ ಕಣದಲ್ಲಿ ಪಸರಿಸಿ ಭೂತವಂತೆ ಬೆಂಬತ್ತಿದವು. ಒಂದೆ ಕ್ಷಣದಲ್ಲಿ ಸಹಸ್ರಾರು ಯೋಚನೆಗಳು ಕವಿದು ಅವನ ಮನದಲ್ಲಿ ಗೊಂದಲವೆಬ್ಬಿಸಿದವು. ಶ್ರೀಧರ ಅವನ ಮನೋವಿಕಾರಗಳನ್ನೆ ನೋಡುತ್ತ ಕುಳಿತಿದ್ದ. ಕಡೆಗೆ ನಾರಾಯಣ ಉಗಳು ನುಂಗಿಕೊಂಡು--

"ಇನ್ಸಪೆಕ್ಟರ ನಾನು ನಿಮಗೆ ನಿಜವನ್ನೆ ಹೇಳುತ್ತಿದ್ದೇನೆ. ನಮ್ಮ ತಂದೆಯ ಕೊಲೆಯಾಗುವ ಪೂರ್ವದಲ್ಲಿ ವಕೀಲರಿಗೊಮ್ಮೆ ಫೋನು ಮಾಡಿದ್ದರು. ತರುವಾಯ ಆನಂದ ಪ್ರಭುಗಳೆಂಬ ತಮ್ಮ ಮಿತ್ರರ ಜೊತೆಗೆ ಫೋನಿನಲ್ಲಿ ಮಾತನಾಡಿದರು. ಅವರು ಮಾತನಾಡುವಾಗ ನನಗೊಂದು ಸ್ವಾರಸ್ಯವಾದ ಶಬ್ದ ಕೇಳಿಸಿತು. ಆದ್ದರಿಂದಲೇ ನಾನು ಅಂದು ಹೊರಬಿದ್ದು ಅವರನ್ನು ಭೆಟ್ಟಿಯಾಗಲು ಹೋಗಿದ್ದೆ."

"ಸ್ವಾರಸ್ಯಪೂರ್ಣವಾದ ಶಬ್ದವಾವದು"

"ಅದು ಬ್ಲ್ಯಾಕ ಮೇಲ"

"ಬ್ಲ್ಯಾಕ ಮೇಲ ಬ್ಲ್ಯಾಕಮೇಲ..........." ಶ್ರೀಧರ ತನ್ನಷ್ಟಕ್ಕೆ ತಾನೆ ಪುಟುಪುಟಸಿದ.

"ನಿಮ್ಮ ತಂದೆಯುವರನ್ನು ಯಾರಾದರೂ ಬ್ಲ್ಯಾಕಮೇಲ ಮಾಡುತ್ತಿದ್ದರೆ?"

''ನನಗೆ ಗೊತ್ತಿದ್ದಮಟ್ಟಿಗೆ ಹಾಗೇನೂ ಇಲ್ಲ. ಆದರೆ ನಿಶ್ಚಿತವಾಗಿ ನಾನೇನನ್ನು ಹೇಳಲಾರೆ."

''ಈ ಆನಂದ ಪ್ರಭುಗಳು ಯಾರು?''

''ಈ ಊರಿನ ದೊಡ್ಡ ಶ್ರೀಮಂತರವರು.''

''ಅಂದು ನೀವು ಆನಂದಪ್ರಭುಗಳನ್ನು ಭೆಟ್ಟಿಯಾಗಿದ್ದೀರಾ?"

''ಅಂದು ಅವರು ಮನೆಯಲ್ಲಿರಲಿಲ್ಲ."

''ಈ ಆನಂದ ಪ್ರಭುಗಳು ನಿಮ್ಮನೆಗಾದರೂ ಬರುತ್ತಿದ್ದರೆ ಮಿ. ನಾರಾಯಣ."

''ಇಲ್ಲ. ನನ್ನ ಹೊರತಾಗಿ ನಮ್ಮ ತಂದೆಗೆ ಮತ್ತು ಅವರಿಗೆ ಪರಿಚಯವಿರುವದನ್ನು ಯಾರು ಅರಿಯರು. ಅವತ್ತಿನ ವರೆಗೆ ನನಗಾದರೂ ಈ ವಿಷಯ ತಿಳಿದಿರಲೇ ಇಲ್ಲ. ನಮ್ಮ ತಂದೆಯವರು ಮಾಡುವ ಗುಪ್ತ ವ್ಯವಹಾರ ನಮಗೆ ಲವಲೇಶವಾದರೂ ತಿಳಿದಿಲ್ಲ.''

''ನಾರಾಯಣ ನೀವು ಈಗ ಹೇಳಿದ್ದನ್ನು ನಾನು ನಿಜವೆಂದು ನಂಬಲೇ?"

''ಯಾಕೆ ಆದರಲ್ಲೇನಿದೆ.''

— ನಾರಾಯಣ ಗಾಬರಿಯಿಂದ ಬೆಚ್ಚಿಬಿದ್ದು ಕೇಳಿದ.

''ನೀವು ನಿಜವಾದ ಸಂಗತಿಯನ್ನು ಹೇಳಿರೆಂದು ನನ್ನ ಭಾವನೆ" ಎನ್ನುತ್ತಾ ಇನಸ್ಪೆಕ್ಟರ ಅಲ್ಲಿಂದ ಕಂಪೌಂಡಿನ ಗೇಟಿನೆಡೆಗೆ ತೆರಳಿದ. ಶ್ರೀಧರ ಗೇಟನ್ನು ತೆರೆದಾಗ ಕಾರಿನಿಂದಿಳಿದು ವೀಣಾ ಒಳಗೆ ಬರುತ್ತಿದ್ದಳು ಶ್ರೀಧರನನ್ನು ನೋಡಿ ಮುಗುಳ್ನಗೆಯಿಂದ--

"ಹಲೋ ಇನ್ಸಪೆಕ್ಟರ ಎಲ್ಲಿಯವರೆಗೆ ಬಂದಿದೆ ನಿಮ್ಮ ಪತ್ತೆದಾರಿ'' ಎಂದು ಕೇಳಿದಳು.

"ನಮ್ಮ ಪತ್ತೇದಾರಿಯೇ ಎಲ್ಲಿಂದ ಪ್ರಾರಂಭವಾಗಿದೆಯೋ ಅಲ್ಲಿಯೇ ಸ್ಥಗಿತವಾಗಿದೆ."

''ಬನ್ನಿ ಇನ್ಸಪೆಕ್ಟರ ಒಳಗೆ ಮಾತನಾಡೋಣ.'' ವೀಣಾ ಅವನೆಡೆಗೆ ನೋಡುತ್ತ ಮುಂದುವರಿದಳು. ಶ್ರೀಧರ ಒಂದೆರಡು ನಿಮಿಷಗಳ ವರೆಗೆ ಹೋಗಲೋ ಬೇಡವೋ ಎಂಬ ಸಂಧಿಗ್ಧ ಪರಿಸ್ಥಿತಿಯಲ್ಲಿ ಹೊಯ್ದಾ

ಡಿದ. ಕಡೆಗೆ ಅವಳ ಹಿಂದಿನಿಂದ ಹೊರಟ. ಬಲಗಡೆಯ ರೂಮಿನಲ್ಲಿಯೇ ವೀಣಾ ಇರುತ್ತಿದ್ದಳು. ಶ್ರೀಧರ ಬಂದು ಕುಳಿತುಕೊಂಡ ಮೇಲೆ ವೀಣಾ ಟೀಯ ವ್ಯವಸ್ಥೆಗಾಗಿ ಒಳಗೆ ತೆರಳಿದಳು. ಶ್ರೀಧರ ಒಮ್ಮೆ ವಿಹಂಗಮ ದೃಷ್ಟಿಯಿಂದ ಅವಳ ಕೋಣೆಯನ್ನು ನೋಡಿದ. ವೀಣಾ ಪುಸ್ತಕ ಪ್ರಿಯ ಳೆಂದು ಕಾಣುತ್ತದೆ. ಸೆಲ್ಫಿನ ಮೇಲೆ ಅನೇಕ ಇಂಗ್ಲೀಷ ಕಾದಂಬರಿಗಳು ಕುಳಿತುಕೊಂಡಿದ್ದವು. ಶ್ರೀಧರನಾದರೂ ವಾಚನಾಭಿರುಚಿಯುಳ್ಳವ. ಪುಸ್ತಕಗಳನ್ನು ನೋಡತೊಡಗಿದ. ಸೋಮರಸೆಟ್‌ಮಾಮ್, ಆಸ್ಕರವಾಯಿಲ್ಡ, ಪರ್ಲಬಕ್, ಥಾಮಸಹಾರ್ಡಿ, ಎಮಿಲಿಝೋಲಾ, ಜೇನ್ನರಸನ್ನ ಕಾ ವಿವಿಧ ಕಾದಂಬರಿಗಳಿದ್ದವು. ಒಂದೆರಡು ಶೆಲ್ಲಿಯ ಕವನ ಸಂಗ್ರಹಗಳು ಇದ್ದವು. ಅವನು ಕಾದಂಬರಿಗಳನ್ನು ನೋಡುವದರಲ್ಲಿ ತಲ್ಲೀನನಾದಾಗ ವೀಣಾ ಚಹ ತೆಗೆದುಕೊಂಡು ಬಂದಳು.

''ನಿಮಗೆ ಸಾಹಿತ್ಯವೆಂದರೆ ಪ್ರೀತಿಯ ವಿಷಯವೆಂದು ಕಾಣುತ್ತದೆ.''

--ಶ್ರೀಧರ ಅವಳು ಬಂದುದನ್ನು ನೋಡಿ ನಗುತ್ತ ಕೇಳಿದ.

''ನಿಜವಾಗಿ ಅದರಲ್ಲೂ ನನಗೆ ಆಂಗ್ಲ ಸಾಹಿತ್ಯವೆಂದರೆ ವಿಶೇಷ ಪ್ರೀತಿ ''ನಿಮಗೆ?''

''ಇಂಗ್ಲೀಷನ್ನೇ ಬಯಸುವವರು ಹೆಚ್ಚು ಜನವೀಗ. ನಾನು ಕಾಲೇಜಿನಲ್ಲಿರುವಾಗ ಓದುತ್ತಿದ್ದೆ. ಈಗಾದರೂ ಆಗೀಗ ಓದುತ್ತಿದ್ದೇನೆ.''

''ಪದ್ಯ ನಿಮ್ಮ ನೆಚ್ಚಿನ ವಿಷಯವೇ?''

—ವೀಣಾ ಅವನ ಕೈಯಲ್ಲಿರುವ ಒಂದು ಕವನ ಸಂಗ್ರಹವೊಂದನ್ನು ನೋಡಿ ಕೇಳಿದಳು.

''ಹೌದು. ಪದ್ಯ ಗದ್ಯಕ್ಕಿಂತಲೂ ಸಂಕ್ಷೇಪವಾದರೂ ಅದರಲ್ಲಿ ಜೀವನದ ನೈಸರ್ಗಿಕ ಅನಂತ ಮುಖಗಳಿವೆ.''

''ಅಂದರೆ ನಿಮಗೆ ಗದ್ಯ ಸೇರುವದಿಲ್ಲವೆಂದಾಯಿತು.''

—ವೀಣಾ ಶ್ರೀಧರನನ್ನು ನೋಡುತ್ತ ಕೇಳಿದಳು.

''ನೀವು ನನ್ನನ್ನು ತಪ್ಪು ತಿಳಿದುಕೊಂಡಿದ್ದಿರಿ. ನಿಜವಾದ ಕವಿಯ ಶ್ರೇಷ್ಠತೆಯು ಜೀವನದ ಪರಿಪೂರ್ಣತೆ ಯಾವದೆಂಬುದನ್ನು ಮನಗಾಣಿಸುವಲ್ಲಿ ಬಾಳುವೆಯ ಸುಂದರವಾದ ವಿಚಾರಗಳನ್ನು ಹೆಣೆಯುವ ಅವನ

ಸಾಮರ್ಥ್ಯದಲ್ಲಿ ಹುದುಗಿಕೊಂಡಿದೆಯೆಂದು ಹೆಸರಾಂತವಿಮರ್ಶಕವ್ಯಾಥೂ ಆರ್ನಾಲ್ಡ್ ಹೇಳಿದ್ದಾನೆ. ಇದರಿಂದ ಕಾವ್ಯವು ಬಾಳುವೆಯ ವಿಮರ್ಶೆ ಯಾಗಲಿಲ್ಲವೇ? ಗದ್ಯವೆಂದರೆ ಶಬ್ದಗಳನ್ನು ಉತ್ಕೃಷ್ಟ ರೀತಿಯಲ್ಲಿ ಹೊಂದಿಸುವದು, ಆದರೆ ಕಾವ್ಯವೆಂದರೆ ಶ್ರೆಷ್ಠ ಶಬ್ದಗಳನ್ನು ಅತ್ಯುತ್ತಮ ರೀತಿಯಲ್ಲಿ ಪೋಣಿಸುವದೆಂದು ಕೋಲರಿಜ್ಜನು ಹೇಳಿದ್ದಾನೆ. ಆದರೂ ನಾನು ಗದ್ಯವನ್ನು ಅಲ್ಲಗಳೆಯಲಾರೆ.''

--ವೀಣಾ ಮಾತನಾಡುವ ಇನ್ಸಪೆಕ್ಟರನನ್ನು ಎವೆಯಿಕ್ಕದೆ ನೋಡುತ್ತ ಕುಳಿತುಕೊಂಡಿದ್ದಳು.

''ಕಾದಂಬರಿಕಾರರಲ್ಲಿ ನಿಮ್ಮ ನೆಚ್ಚಿನವರು ಯಾರು?'' ಶ್ರೀಧರ ಚಹದ ಕಪ್ಪನ್ನೆತ್ತಿಕೊಳ್ಳುತ್ತಾ ಕೇಳಿದ.

''ಥಾಮಸ್ ಹಾರ್ಡಿ ನನ್ನ ಮೆಚ್ಚಿನವ. ಕಾದಂಬರಿಗಳನ್ನು ಬರೆಯುವದಲ್ಲಿ ಸಿದ್ಧಹಸ್ತನವನು. ಅವನ ಕಾದಂಬರಿಗಳೆಲ್ಲ ಸತ್ವಪೂರ್ಣವಾಗಿವೆ. ಸಮಾಜದ ಜೀವನವನ್ನು ಎಳೆ ಎಳೆಯಾಗಿ ಬಿಡಿಸಿ ನೋಡುವದರಲ್ಲಿ, ಹೊಸ ಹೊಸ ಸಮಸ್ಯೆಗಳನ್ನೆದುರಿಸಿ ಉತ್ತರಿಸುವಲ್ಲಿ, ಪಾತ್ರಗಳನ್ನು ಸಜೀವವಾಗಿ ಚಿತ್ರಿಸುವಲ್ಲಿ ಹಾರ್ಡಿಯದು ವೈಶಿಷ್ಟ್ಯಪೂರ್ಣವಾದ ನಿಲವು ಆಂಗ್ಲ ಸಾಹಿತ್ಯದಲ್ಲಿ. ಕೆಲವು ಕಾದಂಬರಿಗಳಲ್ಲಿ ಅವನು ಕಟೆದ ಪಾತ್ರಗಳು ಓದುಗರ ಮನದ ಮೇಲೆ ಅಚ್ಚಳಿಯದೆ ನಿಲ್ಲುತ್ತವೆ. ಸ್ತ್ರೀಪಾತ್ರಗಳನ್ನು ನಿರ್ಮಿಸುವಲ್ಲಿ ಸೋಮರಸೆಟ್ ಮಾಮುನ ಅನುಭವ ವೈಶಾಲ್ಯ ಎದ್ದು ತೋರುತ್ತದೆ. ಸ್ತ್ರೀ ಪಾತ್ರಗಳನ್ನು ಎಷ್ಟು ಸ್ಫುಟವಾಗಿ, ಮನೋ ವಿಶ್ಲೇಷಾತ್ಮಕವಾಗಿ ಮಾಮ್ ಸೃಷ್ಟಿಸಿದ್ದಾನೆ. ಆ ಕತೆಯಲ್ಲಿ ಅವನ ಸಿದ್ಧ ಹಸ್ತ. ಎಮಿಲಿಝೋಲಾನಂತು out spoken writer ಅವನ ಲೇಖನಿ ತೀಕ್ಷ್ಣವಾದ ಖಡ್ಗವಿದ್ದಂತೆ. ಯಾರ ಹಂಗಿಗೂ, ಅಂಕೆಗೂ ಒಳಗಾಗದೆ ಬರೆಯುವನು. ಪರ್ಲಬಕ್ಕಳದಂತು ಭಾಷೆ ಎಷ್ಟು ಸುಮಧುರವೋ ಅಷ್ಟೇ ಸರಳ.''

ಶ್ರೀಧರ ವೀಣಳಿಂದ ಸಾಹಿತ್ಯಕ ವಿಷಯವಾಗಿ ಹೊರಬರುತ್ತಿರುವ ನಿರರ್ಗಳವಾದ ನುಡಿಯ ವಾಹಿನಿಯನ್ನು ಕೇಳುತ್ತ ಕುಳಿತಿದ.'' ಕಡೆಗೆ

"ನಿಮಗೆ ಬೇಸರ ಬಂದಿತೆಂದು ಕಾಣುತ್ತದೆ. ಸಾಹಿತ್ಯದ ವಿಷಯ ಮಾತನಾಡುವಾಗ ನನಗಂತು ಮೈಮೇಲೆ ಸ್ಮೃತಿಯೇ ಇರುವದಿಲ್ಲ. ಇಂದು ನೀವು ಆ ವಿಷಯವಾಗಿ ಕೇಳಿದ್ದರಿಂದ ಮಾತನಾಡಬೇಕಾಯಿತು. ಸಾಹಿತಿಯೆಂದರೆ ನಿರುದ್ಯೋಗಿಯೆಂದು ಹಲವರ ಭಾವನೆ. ಆದರೆ ಸ್ವಾಮಿ ವಿವೇಕಾನಂದರು ಸಹ Literature is the golden mirror of contempraary soceity (ವಾಙ್ಮಯವು ಸಮಕಾಲೀನ ಸಮಾಜದ ರನ್ನ ಕನ್ನಡಿ)ಎಂದು ಹೇಳಿದ್ದಾರೆ."

--ವೀಣಾ ಒಮ್ಮೆಲೆ ವಿಷಯವನ್ನು ಬದಲಿಸಿ—

"ಈ ಕೊಲೆಯ ಬಗ್ಗೆ ಏನಾದರೂ ಬೆಳಕು ಬಿದ್ದಿದೆಯೇ" ಎಂದು ಕೇಳಿದಳು.

"ಹೇಳುವವರು ನಿಜ ಸಂಗತಿಯನ್ನು ಮರೆಮಾಚಿ ಹೇಳಿದರೆ ದಾರಿ ಸುಗಮವಾಗುವದು ಹೇಗೆ?"

--ಶ್ರೀಧರ ಮಾತಿನಲ್ಲಿ ತನ್ನ ಅಸಮಾಧಾನವನ್ನು ವ್ಯಕ್ತಮಾಡಿದ.

ವೀಣಾ ಅವನ ಮಾತು ಕೇಳಿ ಗಾಬರಿಯಿಂದ—

"ಯಾಕೆ ಎಲ್ಲರೂ ಸುಳ್ಳು ಹೇಳುತ್ತಿದ್ದಾರೆಯೆ?"ಎಂದು ಕೇಳಿದಳು.

"ನಾರಾಯಣ ಇಂದಿನವರೆಗೂ ಸುಳ್ಳು ಹೇಳಿದ."

ಶ್ರೀಧರ ವೀಣಳಿಗೆ ಎಲ್ಲ ಸುದ್ದಿಯನ್ನು ಅರುಹಿದ.

"ನಾನು ನಾರಾಯಣ ಪ್ರಾಮಾಣಿಕನೆಂದು ತಿಳಿದಿದ್ದೆ. ಅಜ್ಜನಿಗೆ ಹಾಗಾದರೆ ಯಾರೋ ಬ್ಲ್ಯಾಕಮೇಲ ಮಾಡುತ್ತಿದ್ದರೆನ್ನಿ."

"ಅಶ್ವತ್ಥರಾಯರು ಯಾವದೋ ಒಂದು ಗುರುತರವಾದ ಅಪರಾಧವನ್ನೆಸಗಿದ್ದಾರೆ. ಅದನ್ನು ತಿಳಿದವರು ಸಹ ಈ ಊರಿನಲ್ಲಿದ್ದಾರೆ."

"ಇನ್ಸಪೆಕ್ಟರ, ಮನೆಯಲ್ಲಿಯ ಯಾರಾದರೂ ಕೊಲೆಮಾಡಿದ್ದಾರೆಂದು ನಿಮ್ಮ ಸಂದೇಹವೇನು? ಹಾಗೆ ಯಾರಾದರೂ ಮಾಡಿದ್ದರೆ ಬಲಿಷ್ಠನಾದ ವ್ಯಕ್ತಿಯೇ ಅವನಿರಬೇಕಲ್ಲವೆ?" ವೀಣಾ ಅವನ ಮೋರೆಯನ್ನು ನೋಡುತ್ತ ಕೇಳಿದಳು.

"ನೀವು ಶೇಖರನನ್ನು ಸೂಚಿಸುತ್ತಿರುವಿರಾ?"

"ಇಲ್ಲ, ಇಲ್ಲ, ಹಾಗೇನಿಲ್ಲ. ಕೊಲೆಯಾದ ರೀತಿಯನ್ನು ನೋಡಿ ಆ ರೀತಿಯಾಗಿ ನುಡಿದೆ. ಕಳುವಾದ ಕಾರು ಯಾರದೆಂದು ತಿಳಿಯಿತೆ?"

"ತಿಳಿಯಿತು. ಅವರ ಕಾರು ಕಳೆದು ಎರಡುದಿನವಾಗಿತ್ತಂತೆ. ಆದರೆ ಯಾರು ಒಯ್ದಿದ್ದರೆನ್ನುವದು ಇನ್ನು ಖಚಿತವಾಗಿ ತಿಳಿದಿಲ್ಲ."

"ನನ್ನ ಮೇಲಂತೂ ಯಾವ ಸಂಶಯವಿಲ್ಲ ತಾನೆ?

"ಛೆ, ಛೆ ನೀವು ಯಾವ ಮೋಸವನ್ನು ಅರಿಯದವರು. ಇದೆಲ್ಲಾ ಪೂರ್ವ ಯೋಜನೆಯಿಂದ ಸಿದ್ಧವಾಗಿದೆ."

ಶ್ರೀಧರನ ಹೇಳಿಕೆಯಿಂದ ವೀಣಳಿಗೆ ಸಮಾಧಾನವಾಯಿತೆಂದು ಕಾಣುತ್ತದೆ.

"ನಾರಾಯಣ ಕೊಲೆ ಮಾಡಲಿಲ್ಲವೆಂದು ನನ್ನ ಭಾವನೆ."

"ಆ ರೀತಿಯಾಗಿ ತಿಳಿಯಬೇಡಿ. ಸ್ತ್ರೀಯರಿಂದಲೂ ಒಮ್ಮೊಮ್ಮೆ ಇಂಥ ಕೊಲೆಗಳಾಗುತ್ತವೆ. ಹತ್ಯೆ ಮಾಡುವಾಗ ಮನುಷ್ಯ ಉನ್ಮಾದಾವಸ್ಥೆಯಲ್ಲಿದ್ದು ತನ್ನ ವಿವೇಕ ಬುದ್ಧಿಯನ್ನು ಕಳೆದುಕೊಂಡಿರುತ್ತಾನೆ. ಆ ಸ್ಥಿತಿ ಪಾಶವಿಶಕ್ತಿಯೊಂದು ತಾಂಡವವಾಡುವ ಕಾಲ. ಎಂಥ ಅಳ್ಳೆದೆಯವರಲ್ಲಿ ಸಹ ಆ ಅವಸ್ಥೆಯಲ್ಲಿ ಮೃಗೀಯತೆ ತುಂಬಿರುತ್ತದೆ." ನಾನಿನ್ನು ಹೊರಡುವೆ.

"ಇನ್ಸಪೆಕ್ಟರ ನಿಮ್ಮ ಕೆಲಸಕ್ಕೆ ನನ್ನ ಹೃತ್ಪೂರ್ವಕವಾದ ಸಹಾಯವಿದೆ.

"ಮಾತಿನಿಂದಲ್ಲ ವೀಣಾದೇವಿ, ಕೃತಿಯಿಂದಾಗಬೇಕು." ಎಂದು ಶ್ರೀಧರ ನಗುತ್ತ ಹೊರಬಂದ. ಆಗ ಇದಿರಿನಿಂದ ನರಸಮ್ಮ ಬರುತ್ತಿದ್ದಳು. ಬಹುಶಃ ಒಳಗಿನ ಕಪ್ಪುಗಳನ್ನೆತ್ತಿಕೊಳ್ಳಲು ಇರಬಹುದು. ಶ್ರೀಧರ ವೀಣಳೊಡನೆ ಇಲ್ಲಿಯವರೆಗೆ ನಡೆದ ಸಂಭಾಷಣೆಯನ್ನೆ ಇದಿರಿಗೆ ತಂದುಕೊಳ್ಳುತ್ತಿದ್ದ. ಈ ಸ್ತ್ರೀ ಯಾಕೆ ಮೇಲಿಂದಮೇಲೆ ಶೇಖರನನ್ನು ಸೂಚಿಸುತ್ತಿದ್ದಾಳೆ. ಶೇಖರನ ಮೇಲೆ ಅವಳಿಗೆ ಮೊದಲಿನಿಂದಲೂ ದ್ವೇಷಭಾವನೆಯಿರಬಹುದು. ಶೇಖರನಿಗೂ ಅವಳಿಗೂ ವಿಲ್ಲಿನ ವಿಷಯವಾಗಿ ಜಗಳವಾಗಿರಬಹುದು. ಶೇಖರನಿಗೆ ತನಗೆ ಆಸ್ತಿಯು ದೊರೆಯದೆಂಬ ಭಾವನೆ ಖಚಿತವಾಗಿದೆ. ಆದ್ದರಿಂದ ಅವನೆ ಅವಳನ್ನು ದ್ವೇಷಮಾಡುತ್ತಿರಬಹುದು. ಶ್ರೀಧರ ಯಾವ ನಿರ್ಧಾರಕ್ಕೂ ಬರದೆ ಹೋದ! ಶ್ರೀಧರನೆದುರಿಗೆ ಈ ಸಮಸ್ಯೆ ಬೆಟ್ಟವೇರಲು ನಿಂತ ಕುಂಟನೆದುರಿಗೆ ಅವನ ಹುಚ್ಚು ಸಾಹಸ

ವನ್ನು ಕಂಡು ಕುಹಕದ ನಗೆ ಬೀರುತ್ತ, ಅವನ ಪೌರುಷಕ್ಕೆ ಸವಾಲು ಮಾಡಿನಿಂತ ಬೆಟ್ಟದಂತೆ ನಿಂತಿತ್ತು. ಶ್ರೀಧರ ಪೋಲೀಸ ಸ್ಟೇಶನ್ನಿಗೆ ಬಂದಾಗ ಅವನಿಗಾಗಿ ಒಂದು ಸುದ್ದಿಯು ಕಾದಿತ್ತು. ಅವನು ಬಂದುದನ್ನು ನೋಡಿ ಜೋಸೆಫರು—

ಮಿ. ಶ್ರೀಧರ ಅಶ್ವತ್ಥರಾಯರ ಮನೆಯ ಆಳು ಅಂದು ತನ್ನವರಾರಿಗೋ ಜಡ್ಡಾಗಿದೆಯೆಂದು ತೆರಳಿರಲಿಲ್ಲವೆ? ಅವನಿಂದು ಬಂದಿದ್ದಾನೆ ಅವನಿಗ್ಯಾರೋ ಸುಳ್ಳು ತಾರನ್ನು ಮಾಡಿದ್ದರಂತೆ. ಅದನ್ನು ಕಂಡಕೂಡಲೆ ಅವನು ಗಾಬರಿಯಿಂದ ತನ್ನೂರಿಗೆ ತೆರಳಿದನಂತೆ. ಇವನು ಅಕಸ್ಮಾತ್ತಾಗಿ ಬಂದುದನ್ನು ಕಂಡು ಅವರಿಗೂ ಆಶ್ಚರ್ಯವಾಯಿತಂತೆ ಜಡ್ಡು ಹೇಗಿದೆ? ಔಷಧ ಕೊಡಿಸಿದ್ದೀರಾ ಎಂದು ಇವನು ಹುಚ್ಚುಪಚ್ಚಾಗಿಕೇಳುವುದನ್ನು ನೋಡಿ ಅವರು ನಕ್ಕರು. ಕಡೆಗವನು ಎಲ್ಲ ವಿವರಿಸಿಹೇಳಿದ ಮೇಲೆ ಅವರು ತಾವು ತಾರು ಮಾಡಿಲ್ಲವೆಂದು ಹೇಳಿದರಂತೆ. ಅವನು ಇಲ್ಲಿಗೆ ಬಂದಮೇಲೆ ಅಶ್ವತ್ಥರಾಯರ ಕೊಲೆಯ ಸುದ್ದಿಯು ತಿಳಿಯಿತು. ಅವರ ಕೊಲೆಗೆ ಇದು ಸಂಬಂಧವಿರಬಹುದೆಂದು ತಿಳಿದು ಅವನೆ ಇಂದು ಭೆಟ್ಟಿಯಾಗಿ ತಿಳಿಸಿದ. ಮುಂಚಿತವಾಗಿ ಯೋಜನೆಯನ್ನು ಸಿದ್ಧಪಡಿಸಲಾಗಿದೆಯೆಂದು ಕಾಣುತ್ತದಲ್ಲವೇ?

—ಎಂದು ಜೊಸೆಫರು ನಿಟ್ಟುಸಿರಿನೊಂದಿಗೆ ಪ್ರಶ್ನೆಯನ್ನು ಕೇಳಿದರು.

''ಈ ಕೊಲೆಯಾದ ರೀತಿಯನ್ನು ನೋಡಿ ನನಗೆ ಮೊದಲಿನಿಂದಲೂ ಅದೆ ಸಂದೇಹವಿದ್ದಿತು.

''ನಾರಾಯಣ ನಡುವೆ ಎದ್ದು ಎಲ್ಲಿಗೆ ಹೋಗಿದ್ದನೆಂದು ತಿಳಿಯಿತೇ?"

''ಕಡೆಗೆ ಅವನೆ ಬಾಯಿಬಿಟ್ಟ ಆನಂದಪ್ರಭುಗಳೆನ್ನುವವರು ಇವನ ತಂದೆಯ ಸ್ನೇಹಿತರಂತೆ ಕೊಲೆಯಾಗುವ ಮೊದಲು ಅಶ್ವತ್ಥರಾಯರು ಅವರಿಗೆ ಫೋನು ಮಾಡಿದರಂತೆ. ಬ್ಲ್ಯಾಕಮೇಲ ಎಂಬ ಶಬ್ದವನ್ನು ಕೇಳಿ ಅವರನ್ನು ಭೆಟ್ಟಿಯಾಗಲು ಹೋಗಿದ್ದನಂತೆ. ೮ ರ ವರೆಗೆ ವೇಳೆಗಳೆಯಲು ಪಿಕ್ಚರಿಗೆ ಹೋಗಿದ್ದನಂತೆ. ಅಂದವನಿಗೆ ಆನಂದಪ್ರಭುಗಳು ಭೆಟ್ಟಿಯಾಗಲಿಲ್ಲವೆಂದು ಹೇಳಿದ."

"ಇವರಿಬ್ಬರೂ ತಮ್ಮ ತಂದೆಯವರ ವ್ಯವಹಾರವನ್ನೆ ರಹಸ್ಯವಾಗಿ ನೋಡುತ್ತಿದ್ದರೆಂದು ಕಾಣುತ್ತದೆ."

—ಜೋಸೆಫರು ಕುತೂಹಲದಿಂದ ನುಡಿದರು.

"ಈ ಅಶ್ವತ್ಥರಾಯ ಮಾತ್ರ ನನಗೆ ವಿಚಿತ್ರ ವ್ಯಕ್ತಿಯಾಗಿ ಕಾಣುತ್ತಾನೆ. ಅವನ ಹಿಂದಿನ ಚರಿತ್ರೆಯನ್ನು ಮೊದಲು ತಿಳಿಯಬೇಕು. ಅಂದರೆ ಈ ಬ್ಲ್ಯಾಕಮೇಲಿನ ರಹಸ್ಯ ಹೊರಬರುವದು. ಶೇಖರ ಮತ್ತು ನಾರಾಯಣರಿಬ್ಬರಿಗೂ ನಮಗೆ ಹೇಳಿದುದಕ್ಕಿಂತ ಹೆಚ್ಚಿಗೆ ತಿಳಿದಿದೆ. ನಾರಾಯಣನಂತು ನನಗೆ ಸಂದೇಹಾಸ್ಪದ ವ್ಯಕ್ತಿಯಾಗಿ ಕಾಣುತ್ತಾನೆ. ಜೋಸೆಫ ಆ ನಾರಾಯಣನ ಮೇಲೆ ಇಂದಿನಿಂದಲೇ ಒಬ್ಬ ಸಿ. ಆಯ್. ಡಿ. ಯನ್ನು ಹಾಕಿ ಅವನು ಎಲ್ಲಿಗೆ ಹೋಗುತ್ತಾನೆ, ಏನು ಮಾಡುತ್ತಾತ್ತಾನೆಂಬುದು ಇಂದು ಮುಖ್ಯವಾದ ವಿಷಯವಾಗಿದೆ."

"ಈ ದಿನದ ಅವನ ನಡೆವಳಿಕೆಯೆ?" —ಜೋಸೆಫರು ಅರಳಿದ ಕಣ್ಣುಗಳಿಂದ ಅವನನ್ನು ನೋಡಿದರು.

"ಹೌದು, ಅವನು ನನಗೆ ನಿಜವನ್ನು ಹೇಳಿರುವನೆಂದು ನನಗೇನೂ ನಂಬಿಕೆಯಿಲ್ಲ. ಶೇಖರನ ಮುಂಬಯಿಯ ವಿಷಯವೇನಾಯಿತು?"

"ಅಂದು ಅವರು ಮುಂಬಯಿಗೆ ತೆರಳಿದ್ದು ನಿಜ. ಆದರೆ ಅವನು ಎಂದು ಮುಂಬಯಿಯನ್ನು ಬಿಟ್ಟು ಇಲ್ಲಿಗೆ ಬಂದನೆಂಬುದು ನಿಶ್ಚಿತವಾಗಿಲ್ಲ."

"ಕೆಂಪು ಕೋಟಿನ ರಹಸ್ಯವು ಹಾಗೆಯೆ ಉಳಿದಿದೆ. ಈ ಕೊಲೆಯಲ್ಲಿ ರಹೀಮನ ಪಾತ್ರ ಸಹ ಇರುವಂತೆ ಕಾಣುತ್ತದೆ. ಅವನನ್ನು ವಾಚ ಮಾಡುವದವಶ್ಯ."

"ಆಗಲಿ ಸರ್ ಅದರಂತೆ ವ್ಯವಸ್ಥೆ ಮಾಡುವೆ."

ನಾರಾಯಣನ ಮೇಲೆ ಶ್ರೀಧರ ಅನುಮಾನಪಟ್ಟ ಸಂಗತಿ ಯಶಸ್ವಿಯಾಗಿತ್ತು. ಅವನ ಮೇಲೆ ಒಬ್ಬ ಸಿ. ಆಯ್. ಡಿ. ಯನ್ನು ನಿಯಮಿಸಲಾಗಿತ್ತು. ನಾರಾಯಣ ಇನಸ್ಪೆಕ್ಟರರೊಡನೆ ಮಾತನಾಡಿ ಒಂದೆರಡು ತಾಸು ಕಳೆದ ಮೇಲೆ ಆನಂದಪ್ರಭುಗಳ ಮನೆಗೆ ಹೊರಟಿದ್ದ. ಅವನನ್ನು ಒಬ್ಬ ಬೇಹುಗಾರ ಬೆನ್ನು ಹತ್ತಿದ. ನಾರಾಯಣ ಮೊದಲು ಕೇಫೆ ವ್ಹಿಕ್ಟೋರಿಯಾದಲ್ಲಿ ೧೫—೨೦ ನಿಮಿಷ ಕುಳಿತುಕೊಂಡ. ಅಲ್ಲಿ ಯಾರೋ

ಅವನನ್ನು ಭೆಟ್ಟಿಯಾಗುವವರಿದ್ದರೆಂದು ಕಾಣುತ್ತದೆ. ಅಡಿಗಡಿಗೆ ಉತ್ಸುಕತೆಯಿಂದ ಬಾಗಿಲೆಡೆಗೆ ನೋಡುತ್ತಿದ್ದ. ತನ್ನ ಕೈಯಲ್ಲಿ ವಾಚನ್ನು ನಿಟ್ಟಿಸುತ್ತಿದ್ದ. ಎದುರಿಗಿದ್ದ ಕಾಫಿಯನ್ನು ಅರೆ ಮನಸ್ಕನಾಗಿ ಗುಟುಕರಿಸುತ್ತಿದ್ದ. ಸಿ. ಆಯ್. ಡಿ. ದೂರ ಕುಳಿತು ಕಣ್ಣಲ್ಲಿ ಕಣ್ಣಿಟ್ಟು ಈ ಸಂಗತಿಯನ್ನು ನಿರೀಕ್ಷಿಸುತ್ತಿದ್ದ. ದಾರಿಗಾಯುತ್ತಿದ್ದ ನಾರಾಯಣ ಚಡಪಡಿಸಿ ಎದ್ದು ಹೊರ ಹೊರಡಲು ಸಿದ್ಧನಾದ. ಅಷ್ಟರಲ್ಲಿ ಹೊರಗಿನದೊಂದು ವ್ಯಕ್ತಿ ಬಂದು ಬಹು ಮೆಲ್ಲಗೆ—

''ನೀವೆಯೋ ನಾರಾಯಣ ಎಂದರೆ?'' ಎಂದು ಕೇಳಿತು.

''ನಾರಾಯಣ ಸುತ್ತಲೂ ಒಮ್ಮೆ ಸೂಕ್ಷ್ಮ ದೃಸ್ಟಿಯಿಂದ ನೋಡಿ ಹೇಳಿದ.—

''ಅಹುದು. ನಾನೆ ಅವನು" ಅವರಿಬ್ಬರ ನಡುವೆ ಯಾವದೋ ಗಹನವಾದ ವಿಷಯದ ಬಗ್ಗೆ ಚರ್ಚೆ ನಡೆದಿತ್ತೆಂದು ಕಾಣುತ್ತದೆ. ಕಡೆಗೆ ನಾರಾಯಣನ ಮೋರೆಯ ಮೇಲೆ ನಿರಾಶೆಯ ಕಾರ್ಮೋಡಗಳು ಕವಿದು ಅವನು ಇಚ್ಛೆ ಇಲ್ಲದವನಂತೆ ಎದುರಿನಲ್ಲಿದ್ದ ವ್ಯಕ್ತಿಯ ಮಾತುಗಳನ್ನು ಕೇಳುತ್ತಿದ್ದ. ಕಡೆಗೆ ಆ ವ್ಯಕ್ತಿ.—

"ಇಂದು ಅರ್ಜಂಟಾಗಿ ಅವರಿಗೆ ಕೆಲಸವಿದ್ದದ್ದರಿಂದ ಬರಲಾಗಲಿಲ್ಲ ಮುಂದಿನಸಲ ಅವರು ಬರುತ್ತಾರೆ'' ಎಂದು ನುಡಿಯಿತು.

''ಅವರಿಂದೆ ಬಂದಿದ್ದರೆ ಚೆನ್ನಾಗಿತ್ತು"–ನಾರಾಯಣನ ನುಡಿಯಲ್ಲಿ ಅಸಮಾಧಾನದ ಹೊಗೆಯನ್ನು ಕಾರಿ ಹೊರಬಿದ್ದ ಅವನಿಗಿಂತ ಮೊದಲೆ ಬಂದ ಅಗಂತುಕ ಹೊರಟುಹೋದ. ನಾರಾಯಣನನ್ನು ಹಿಂಬಾಲಿಸುತ್ತ ಸಿ. ಆಯ. ಡಿ. ಹೆಜ್ಜೆಹಾಕಿದ. ಈಗವನು ಸ್ವಲ್ಪ ಚುರುಕಾಗಿಯೇ ನಡೆಯುತ್ತಿದ್ದ. ನಾರಾಯಣ ಸಿಟಿಬಸ್ಸಿಗಾಗಿ ನಿಲ್ದಾಣದಲ್ಲಿ ಕಾಯುತ್ತ ನಿಂತ. ಬಸ್ ಬಂದೊಡನೆಯೆ ಅದನ್ನೇರಿದ. ೧೫-೨೦ ನಿಮಿಷಗಳ ತರುವಾಯ ಅವನು ಆನಂದ ಪ್ರಭುಗಳ ಮನೆಯೆದುರು ಇಳಿದ. ಅಲ್ಲಿಯೇ ಇದ್ದ ಅವರ ಆಫೀಸಿನೆಡೆಗೆ ತೆರಳಿದ. ಆಫೀಸಿನ ಪಕ್ಕದಲ್ಲಿಯೇ ಅವರ ಭವ್ಯವಾದ ಮನೆ ವಿರಾಜಮಾನವಾಗಿತ್ತು. ಸಿ. ಆಯ. ಡಿ. ಒಳಗೆ ಹೋಗುವಂತಿರಲಿಲ್ಲವಾದರೂ ದೂರದಿಂದಲೇ ಆಫೀಸಿನಲ್ಲಿ ನಡೆಯುವ ವ್ಯವಹಾರ

ಬಾಗಿಲಿಗೆ ಅಳವಡಿಸಿದ ಗಾಜುಗಳ ಮೂಲಕ ಕಾಣುತ್ತಿತ್ತು. ನಾರಾಯಣ ಅಲ್ಲಿ ಯಾರೊಡನೆಯೋ ಮಾತನಾಡುತ್ತಿದ್ದ. ಜೇಬಿನಿಂದ ಅವನಿಗೇನೋ ಕೊಟ್ಟ. ಅವರಿಬ್ಬರು ಅರ್ಧತಾಸಿನವರೆಗೆ ಮಾತನಾಡಿದರು. ಆ ತರುವಾಯ ನಾರಾಯಣ ಹಸನ್ಮುಖದಿಂದ ಹೊರಬಂದ ಹಾಗೆಯೇ ಸುತ್ತಾಡಿಕೊಂಡು ಮನೆಗೆ ತೆರಳಿದ. ಈಸುದ್ದಿಯನ್ನು ಸಿ. ಆಯ. ಡಿ. ಇನ್ಸಪೆಕ್ಟರರಿಗೆ ತಲುಪಿಸಿದ. ಶ್ರೀಧರ ಎಣಿಸಿದಂತೆಯೇ ನಡೆದಿತ್ತು. ಕೇಫೆಯಲ್ಲಿ ನಾರಾಯಣ ಮತ್ತು ಇನ್ನೊಬ್ಬನೊಡನೆ ನಡೆದ ವ್ಯವಹಾರವನ್ನೇ ವಿಚಾರ ಮಾಡುತ್ತ ಕುಳಿತುಕೊಂಡ. ಆ ಬಂದ ಆಗಂತುಕನು ಯಾರು? ಅವನು ಬಂದು ಮಾತನಾಡಿದ ರೀತಿಯನ್ನು ನೋಡಿದರೆ ಈ ಮೊದಲು ನಾರಾಯಣ ಅವನನ್ನು ಅರಿತಿರಲಿಲ್ಲವೆಂದು ಸ್ಪಷ್ಟವಾಗುವದು. ಯಾವದೋ ಒಂದು ಗುಪ್ತ ಸಂಗತಿಯು ಚರ್ಚೆಗಾಗಿ ಅಲ್ಲಿಗೆ ತೆರಳಿದ್ದಾನೆ. ನಾರಾಯಣ ಯಾವದನ್ನೂ ಅರಿಯದವನಂತಿದ್ದರೂ ಎಲ್ಲ ಅರಿತಿದ್ದಾನೆ.

ಸಂಜೆಯ ೭ ಗಂಟೆಯ ಸುಮಾರಿಗೆ ಪ್ರಸನ್ನಕುಮಾರರ ಕಾರು ಅಶ್ವತ್ಥರಾಯರ ಮನೆಯೆದುರು ಬಂದು ನಿಂತಿತು. ಅವರು ಬರುವದು ಮನೆಯವರಿಗೆಲ್ಲ ಮೊದಲೇ ತಿಳಿದಿತ್ತೆಂದು ಕಾಣುತ್ತದೆ. ಶೇಖರ ಬಂದು ಅವರನ್ನು ಸ್ವಾಗತಿಸಿ ಒಳಗೆ ಕರೆದುಕೊಂಡು ಹೋದ. ಮೇಜಿನ ಸುತ್ತಲೂ ಅವರೆಲ್ಲ ಮೌನವಾಗಿ ಕುಳಿತುಕೊಂಡರು. ಪ್ರಸನ್ನ ಕುಮಾರರು ಒಂದೆರಡು ನಿಮಿಷಗಳ ವರೆಗೆ ಅವರನ್ನೆಲ್ಲ ದಿಟ್ಟಿಸಿ ನೋಡಿ ಒಂದು ಕಾಗದವನ್ನು ಜೇಬಿನಿಂದ ಹೊರತೆಗೆದು "ನಾನು ವಿಲ್ಲನ್ನು ಓದಬಹುದೇನು?" ಎಂದು ಕೇಳಿದರು. ಕುಳಿತವರ ಸಮ್ಮತಿ ಅದಕ್ಕೆ ದೊರೆಯಿತು. ಅಶ್ವತ್ಥರಾಯರ ಆಸ್ತಿಯು ಬಹುಭಾಗ ವೀಣಳಿಗೆ ಹೋಗುತ್ತಿತ್ತು. ಉಳಿದ ಭಾಗದಲ್ಲಿ ಅವನು ಗಂಡುಮಕ್ಕಳಿಗೆಲ್ಲ ಹಂಚಲಾಗಿತ್ತು. ಓದುವದು ಮುಗಿದಮೇಲೆ ಶೇಖರ ವೀಣಳನ್ನು ಉರಿಗಾರುವ ಕಣ್ಣುಗಳಿಂದ ನೋಡಿದ. ತನ್ನ ಆ ಜನ್ಮ ಶತ್ರುವನ್ನು ನೋಡಿದಂತೆನಿಸಿತು ಅವನಿಗೆ.

"ಮುದುಕನಿಗೆ ಸಾಯುವಕಾಲಕ್ಕಾದರೂ ಬುದ್ಧಿ ಬರಲಿಲ್ಲ."

—ಹೆಡೆತೆರೆದ ಹಾವು ಕ್ರೋಧದಿಂದ ಫಣಿಯನ್ನು ನೆಲಕ್ಕಪ್ಪಳಿಸುವಂತೆ ಬುಸುಗುಟ್ಟಿದ.

"ಸತ್ತವರನ್ನು ಕುರಿತು ಹಾಗೆ ನುಡಿಯಬಾರದು ಶೇಖರ'' ಮಾಧವ ಅವನನ್ನು ಸಮಾಧಾನ ಮಾಡಲು ನುಡಿದ. "ಹೊಟ್ಟೆಯ ಸಂಕಟ ತಡೆಯದಿದ್ದರೆ ಅವರಾದರೂ ಏನು ಮಾಡಬೇಕು.''

—ವೀಣಳ ಧ್ವನಿಯಲ್ಲಿ ವ್ಯಂಗ್ಯದ ಹಾಲಾಹಲ ತುಂಬಿತ್ತು

ಶೇಖರ ಸಿಡಿದೆದ್ದು ನುಡಿದ—

"ನೀನೇನು ಮನುಷ್ಯಳೋ ಅಥವಾ ರಾಕ್ಷಸಿಯೋ!''

"ಶೇಖರ ನಾಲಿಗೆ ಹಿಡಿದು ಮಾತನಾಡು''—ವೀಣಾ ಅಷ್ಟೇ ಕಾವಿನಿಂದ, ಜೋರಿನಿಂದ ನುಡಿದಳು.

ಜಗಳ ವಿಪರೀತವಾಗುವದೆಂದು ಪ್ರಸನ್ನಕುಮಾರರು ವೀಣಳನ್ನು ಕರೆದುಕೊಂಡು ಹೊರಗೆ ಬಂದರು.

ಇತ್ತ ಉಳಿದ ಅಣ್ಣಂದಿರು ಶೇಖರನಿಗೆ ಸಮಾಧಾನವನ್ನು ಹೇಳುತ್ತಿದ್ದರು. ಆದರೆ ನಾರಾಯಣ ತನಗೆ ಇದಾವದು ಸಂಬಂಧವಿಲ್ಲವೆಂಬತೆ ಸ್ಥಿತಪ್ರಜ್ಞನಂತೆ ಒಂದೆಡೆ ಕುಳಿತುಕೊಂಡಿದ್ದ. ಪ್ರಸನ್ನ ಕುಮಾರರಿಗೆ ನಾರಾಯಣನ ಶಾಂತಸ್ವಭಾವ ಮನಸ್ಸಿಗೆ ಹಿಡಿಯಿತೆಂದು ಕಾಣುತ್ತದೆ. ಅದನ್ನು ಮೆಚ್ಚಿ ಮಾತನಾಡಿದರು. ಶೇಖರ ಕಠೋರ ಸ್ವರದಿಂದ ಚೀರಿ ಮಾತನಾಡುತ್ತಿದ್ದ.

''ನೋಡಿ ಅವನಿಗೆ ನಾನು ಮಾಡಿದ್ದಾದರೂ ಏನು? ಯುಸಲೆಸ್ ಹೇಗೆ ನನ್ನಮೇಲೆ ಕಿಡಿಗಾರುತ್ತಿದ್ದಾನೆ." ಹೊರಗೆ ಬಂದ ವೀಣಾ ಪ್ರಸನ್ನಕುಮಾರರಿಗೆ ಹೇಳಿದಳು.

''ಅವರವರ ಸ್ವಭಾವ ಬಿಡಿ. ನೀವೇಕೆ ಅವನ ಮೇಲೆ ವೃಥಾ ಕೋಪಗೊಳ್ಳುವಿರಿ."

--ವಿವಶಳಾದ ಅವಳಿಗೆ ಸಾಂತ್ವನವನ್ನೀಯುತ್ತ ಪ್ರಸನ್ನಕುಮಾರರು ನುಡಿದರು.

"ದುಷ್ಟ ಸ್ವಭಾವವಿದು. ಯಾರನ್ನು ಕಂಡರೂ ಆಗದಂಥ ಸ್ವಭಾವ''

''ನೀವು ಸ್ವಲ್ಪ ಮುಂಜಾಗ್ರತೆಯಿಂದಿರಬೇಕು ವೀಣಾದೇವಿ.''

--ಪ್ರಸನ್ನಕುಮಾರರು ಅವಳನ್ನೂ ಎಚ್ಚರಿಸುವಂತೆ ನುಡಿದರು.''

"ನನ್ನನ್ನೇನು ಮಾಡುವನು ಬಿಡಿ ಇವನು. ಯೂಸಲೆಸ್...........
ಯೂಸಲೆಸ್."

—ಎಂದು ವೀಣಾ ನುಡಿದಳು. ಅವಳ ಧ್ವನಿಯಲ್ಲಿ ಭಯಕ್ಕೆ ಎಡೆಯಿರದೆ ಇರಲಿಲ್ಲ. ಶಿವನ ತಾಂಡವ ನೃತ್ಯದಂತೆ ತಡೆಯಿಲ್ಲದಲೆ ಅವನ ವಾಗ್ಧಾರೆ ಸಾಗಿತ್ತು. ಅಣ್ಣಂದಿರು ಸಮಾಧಾನ ಹೇಳಿದರೂ ಅವನು ಕೇಳಲಿಲ್ಲ. ಅವನು ಬಯ್ಯುವದು ವೀಣಳಿಗೆ ಅಸ್ಪಷ್ಟವಾಗಿ ಕೇಳಿಬರುತ್ತಿತ್ತು. ಅವನ ಮಾತಿನಿಂದ ವೀಣಳಿಗೆ ನಖಶಿಖಾಂತವಾಗಿ ಸಿಟ್ಟು ಭುಗಿಲೆಂದು ಉರಿಯುತ್ತಿತ್ತು. ಹೋಗಿ ಒಂದೆರಡು ಅಪ್ಪಳಿಸಬೇಕೆಂಬ ಭಾವ ಹುಟ್ಟುತ್ತಿತ್ತು. ಆದರೆ ಆ ರೀತಿ ಮಾಡುವದರಿಂದ ದ್ವೇಷ ಬೆಳೆಯುತ್ತ ಹೋಗುವದೆಂದು ಸುಮ್ಮನಾದಳು. ಶೇಖರನ ಅಸ್ಪಷ್ಟವಾದ ಧ್ವನಿ— "ಇವಳೆ ಏನೋ ಮಾಡಿದ್ದಾಳೆ. ಇವಳ ಕೊಲೆ ಮಾಡದೆ ಬಿಡುವವನಲ್ಲ........ಇವಳಾದರೂ ಮನೆಯಲ್ಲಿರಬೇಕು ಅಥವಾ........ ನಾನಾದರೂ ಇರಬೇಕು." ಕೇಳಿ ವೀಣಳ ಮೋರೆ ಭಯದಿಂದ ಬೆಳ್ಳಗಾಗುತ್ತಿತ್ತು. ಇವನು ಏನನ್ನು ಮಾಡಲಿಕ್ಕೂ ಹೇಸುವವನಲ್ಲವೆಂದು ಅವಳಿಗೆ ತಿಳಿಯಿತು. ವಿವಶಳಾದ ಅವಳ ಮನವು ಇನ್ಸಪೆಕ್ಟರರಿಗೆ ಈ ಸುದ್ದಿಯನ್ನು ತಿಳಿಸಿದ ಮೇಲೆಯೆ ಸ್ತಿಮಿತಕ್ಕೆ ಬಂದಿತು. ಶ್ರೀಧರ ಅವಳಿಗೆ ಧೈರ್ಯವನ್ನು ಹೇಳಿ ಕಳುಹಿಸಿಕೊಟ್ಟ. ಈ ಹೊಸ ಸಮಸ್ಯೆ ಅವನೆದುರಿಗೆ ಭೂತದಂತೆ ಬೆಳದು ಅಣಕಿಸುತ್ತಿತ್ತು.

"ಬನ್ನಿ ಬನ್ನಿ ಸರ್. ಒಳಗೆ ಬನ್ನಿ." ಆನಂದ ಪ್ರಭುಗಳ ಕಚೇರಿ ಯಲ್ಲಿಯ ಕ್ಲಾರ್ಕು ಇನ್ಸಪೆಕ್ಟರರನ್ನು ಆದರದಿಂದ ಎದುರುಗೊಂಡ. ಅಲ್ಲಿಯೇ ಇದ್ದ ಚೇರಿನ ಮೇಲೆ ಆಸೀನನಾಗಿ ಆನಂದ ಪ್ರಭುಗಳ ಬಿಸಿನೆಸ್ ವಿಷಯವಾಗಿ ಮಾತನಾಡಿದ. ಅವನಿಂದ ಆನಂದ ಪ್ರಭುಗಳ ಮೋಟಾರ ಕಂಪನಿಗೆ ಶುಕ್ರದೆಸೆ ಒದಗಿದೆಯೆಂಬುದು ತಿಳಿಯಿತು. ೮-೯ ವರುಷಗಳ ಹಿಂದಿನ ಸುದ್ದಿಯೂ ಸಹ ತಿಳಿಯಿತು. ಆಗ ಪಾಪ ಆನಂದ ಪ್ರಭುಗಳ ಕಂಪನಿಗೆ ಬಹಳ ಹಾನಿಯಾಗಿತ್ತಂತೆ. ಈಗವರು ಕುಬೇರರಾಗಿದ್ದಾರೆ. ಕಚೇರಿಯ ಬಲಗಡೆಯೆ ಆನಂದ ಪ್ರಭುಗಳ ಚಿಕ್ಕ ಅರಮನೆ

"ನಿಮ್ಮ ಯಜಮಾನರು ಇಲ್ಲಿಗೆ ಬರುವರೋ? ಅಥವಾ ಮನೆಯಲ್ಲಿ ಭೆಟ್ಟಿಯಾಗಲೋ?"

"ನೀವು ಮನೆಗೆ ಹೋಗಿ ಭೆಟ್ಟಿಯಾಗುವದೆ ಒಳಿತು"ಎಂದು ಕ್ಲಾರ್ಕ ಹೇಳಿದ.

ಸಮೀಪದಲ್ಲಿಯೇ ಇದ್ದ ಅವರ ವಾಸಸ್ಥಳವೆಡೆಗೆ ಹೆಜ್ಜೆ ಹಾಕಿದ. ಮನೆಯೆದುರಿಗಿರುವ ವಿಶಾಲವಾದ ಕಂಪೌಂಡು ಹಾಳು ಸುರಿಯುತ್ತಿತ್ತು. ನೀರಿನ ವ್ಯವಸ್ಥೆ ಸಮೃದ್ಧವಾಗಿದ್ದರೂ ತೋಟವನ್ನು ಮಾಡುವ ಗೋಜಿಗೆ ಯಾರೂ ಹೋಗಿರಲಿಲ್ಲ. ಅಲ್ಲಲ್ಲಿ ಕಂಟಿಗಳು ಬೆಳೆದಿದ್ದವು. ಹುಲ್ಲು ಭರ ದಿಂದ ಬೆಳೆದು ಹಚ್ಚಹಚ್ಚನ್ನ ಆರಿವೆಯನ್ನು ನೆಲಕ್ಕೆ ಹಾಸಿದಂತೆ ಕಾಣು ತ್ತಿತ್ತು. ಒಂದೆರಡು ಹೂವಿನ ಗಿಡಗಳಿಂದ ಪುಷ್ಪಗಳು ಅನುರಣಿತವಾಗಿ ದಾರಿಗಾರರು ತಮ್ಮನ್ನು ನೋಡಲೆಂಬಂತೆ ಮುಖವನ್ನು ಮೇಲೆತ್ತಿ ನಿಂತು ಕೊಂಡಿದ್ದವು ಪೂರ್ವಜರ ಆಸ್ತಿಯೆಂಬಂತೆ ದೊಡ್ಡ ಮರಗಳು ಪಕ್ಷಿಗಳ ನಿವಾಸವಾಗಿದ್ದವು. ಅದನ್ನು ನೋಡುತ್ತ ಶ್ರೀಧರ ಮುಂದುವರೆದ. ಬಾಗಿಲ ಹತ್ತಿರ ಬಂದು ಅಲ್ಲಿಯೇ ಇದ್ದ ಆಳಿನ ಕೈಯಲ್ಲಿ ತನ್ನ ವಿಜಿಟಿಂಗ ಕಾರ್ಡನ್ನು ಕೊಟ್ಟು ಕಳುಹಿಸಿ ಪಡಸಾಲೆಯಲ್ಲಿಯ ಸೋಫಾದ ಮೇಲೆ ಕುಳಿತುಕೊಂಡ. ಪಡಸಾಲೆ ವಿಶಾಲವಾಗಿತ್ತು. ಟೀಪಾಯ, ಮೇಜು

ಕುರ್ಚಿಗಳಿಂದ ತುಂಬಿತ್ತು. ಕೆಳಗೆ ನಸುಗೆಂಪಾದ ಒಂದು ಜಮಖಾನೆ ಯನ್ನು ಹಾಸಲಾಗಿತ್ತು. ೧೦-೧೫ ವಿವಿಧ ನಮೂನೆಯ ಲಾಯಿಟುಗಳು ಹಾಲಿನೊಂದರಲ್ಲಿಯೇ ಇದ್ದವು. ಒಂದೆಡೆಗೆ ಗೋಡೆಯ ಮೇಲೆ ವಿವಿಧ ಮಾರ್ಗಗಳಿಂದ ದೇವರನ್ನು ಸಾಕ್ಷಾತ್ಕರಿಸಿಕೊಂಡ, ಭಗವಂತನನ್ನು, ಧರ್ಮ, ಸತ್ಯಗಳನ್ನು ನಾವು ಪ್ರಪಂಚವನ್ನು ನೋಡುವದಕ್ಕಿಂತ ಅತಿಶಯವಾಗಿ ಅನುಭವಿಸಬಹುದು, ನೋಡಬಹುದು; ಎಂದು ಕೆಚ್ಚೆದೆಯಿಂದ ಸಜೀವ ಸಂದೇಶವನ್ನು ಬೀರಿದ ಅಧ್ಯಾತ್ಮಿಕ ಮಹಾನುಭಾವ ಮನುಷ್ಯನ ಏಕ ಮೇವ ಆದರ್ಶ ಭಗವಂತನೆಂದು ಸಾರಿದ, ನಿರ್ಜೀವಿಗಳಾದ ಜನತೆಯಲ್ಲಿ ಸಚೇತನದ ವಸಂತ ಋತುವನ್ನು ಮೂಡಿಸಿದ, ಉಜ್ವಲವಾದ ಬೆಳಕನ್ನು ನಯನಗಳಿಂದ ಹೊರಸೂಸುತ್ತ ಪದ್ಮಾಸನ ಹಾಕಿ ಕುಳಿತ ಶ್ರೀ ರಾಮ ಕೃಷ್ಣ ಪರಮಹಂಸರ ಚಿತ್ರ, ಇನ್ನೊಂದೆಡೆ ವಿಶ್ವದಲ್ಲಿ ಭಾರತೀಯ ಸಂಸ್ಕೃ ತಿಯ ಪ್ರಚಂಡ ತರಂಗಗಳಿಂದ ವಿಸ್ಮಯಗೊಳಿಸಿದ, ಕೇಸರಿ ಕಂಠದಿಂದ ಜನತೆಯನ್ನು ಹೊಡೆದೆಬ್ಬಿಸಿದ ಶಾರದೆಯ ಪುತ್ರ ಸ್ವಾಮಿ ವಿವೇಕಾನಂದರು ಕರ್ಮಯೋಗದ ನಿಜ ಸಂದೇಶವನ್ನು ಸಾರಿದ, ಮುಗುಳ್ನಗೆಯಿಂದ ಕೂಡಿದ ಬಾಪೂಜಿ, ರಾಜಕೀಯ ಉತ್ತುಂಗ ಶಿಖರದ ಮೇಲೆ ಭಾರತದ ಕೀರ್ತಿ ಧ್ವಜವನ್ನು ಹಿಡಿದು ನಿಂತ ನೆಹರು ಮೊದಲಾದವರ ಚಿತ್ರಗಳು ಗೋಡೆಗಳನ್ನಲಂಕರಿಸಿದ್ದವು. ಶ್ರೀಧರ ಇವನ್ನೆಲ್ಲ ನೋಡುತ್ತ ತನ್ಮಯ ನಾದ ವೇಳೆಯಲ್ಲಿ ಮೆಟ್ಟಲುಗಳನ್ನಿಳಿಯುತ್ತ ಆನಂದ ಪ್ರಭುಗಳು ಬಂದರು. ಅವರದೇನೂ ಆಕರ್ಷಕವಾದ ವ್ಯಕ್ತಿತ್ವವಲ್ಲ. ಬೊಜ್ಜು ಬೆಳೆ ದಿತ್ತು. ಮೈಯಲ್ಲಿ ಮಾಂಸದಗಟ್ಟುಗಳು ಕಾಣುತ್ತಿದ್ದವು. ತೊಗಲು ಮಾಂಸದ ಭಾರ ತಡೆಯಲಾರದೆ ಜೋತುಬಿದ್ದಂತೆ ಕಾಣುತ್ತಿತ್ತು. ಅವರ ಗದ್ದ ಮಾತನಾಡುವಾಗ ನಡುಗುತ್ತಿತ್ತು. ಕೈಯಲ್ಲಿ ಒಂದೆರಡು ಹರಳಿನ ಉಂಗುರುಗಳು ಮಿಂಚುತ್ತಿದ್ದವು. ಆನಂದ ಪ್ರಭುಗಳನ್ನು ಒಮ್ಮೆ ನೋಡಿ ದವರು ಸುಖದ ಮೂರ್ತಿಮಂತ ಸ್ವರೂಪವೆಂದು ನಿಶ್ಚಿತವಾಗಿ ನುಡಿಯು ತ್ತಿದ್ದರು.

''ಏನು, ಅಪರೂಪ ಇನಸ್ಪೆಕ್ಟರ ಭೆಟಿ'' ನಗೆಯ ಬಾಣವನ್ನು ಎಸೆದು ಆನಂದ ಪ್ರಭುಗಳು ಕುಳಿತರು.

"ನೋಡಿ, ನಾನು ಬಂದ ಕಾರಣ ನೀವಾಗಲೆ ಗ್ರಹಿಸಿರಬಹುದು."
— ಶ್ರೀಧರ ನೇರವಾಗಿ ವಿಷಯವನ್ನು ಮುಂದೆ ಚಾಚಿದ. "ಅಶ್ವತ್ಥ ರಾಯರು ಕೊಲೆಯಾಗುವ ಮುನ್ನ ನಿಮಗೆ ಫೋನು ಮಾಡಿದ್ದರಂತೆ ಯಾವ ವಿಷಯವೆಂಬುದನ್ನು ತಿಳಿಸಬಹುದೇನು?" 'ಅಂದಿನ ದಿನವೇ ಸುಮಾರು ೬—೪೦ ಕ್ಕೊ ಅಥವಾ ೬—೫೦ ಕ್ಕೊ ಅಶ್ವತ್ಥ ನನಗೆ ಫೋನು ಮಾಡಿದ, ಬಿಜಿನೆಸ್ ವಿಷಯವಾಗಿ ಮಾತನಾಡುವದಿದೆಯೆಂದು ತಿಳಿಸಿದೆ. ೮ ಗಂಟೆಗೆ ತಾನೆ ಬಂದು ಭೆಟ್ಟಿಯಾಗುವೆನೆಂದು ಸಹ ಹೇಳಿದ. ಆದರೆ ನಿಶ್ಚಿತ ವೇಳೆಗೆ ಅವನು ಬರಲಿಲ್ಲ.'—ಆನಂದ ಪ್ರಭುಗಳು ನುಡಿದರು.

"ಹಾಗಾದರೆ ವ್ಯವಹಾರದ ವಿಷಯವೇ ಅದು."

"ಹೌದು. ಅದೇನು ಮುಖ್ಯ ವಿಷಯವಲ್ಲ ಬಿಡಿ ನನ್ನ ಮೋಟಾರ ಕಂಪನಿಗೆ ಅವನು ಸಹಾಯವನ್ನು ಮಾಡಿದ್ದ. ಅದೆ ವಿಷಯವಾಗಿ ಮಾತನಾಡುವವನಿದ್ದನೆಂದು ಕಾಣುತ್ತದೆ."

"ಅಶ್ವತ್ಥರಾಯರಿಗೆ ಮತ್ತು ನಿಮಗೆ ಎಂದಿನಿಂದ ಪರಿಚಯವಿರುವದು. ಈ ವ್ಯವಹಾರದಿಂದಲೇ ಅಥವಾ ಮೊದಲಿನಿಂದಲೋ?"

"ಅಶ್ವತ್ಥ ನನ್ನ ಬಾಲ್ಯ ಸ್ನೇಹಿತ. ಆದರೆ ನಡುವೆ ಮಾತ್ರ ಕೆಲವು ವರ್ಷ ಎಲ್ಲಿಯೋ ಹೋಗಿದ್ದ. ಹೋದವನು ಶ್ರೀಮಂತನಾಗಿಯೇ ಮರಳಿ ಬಂದ. ಬಾಲ್ಯದಲ್ಲಿ ಮಾತ್ರ ಬಹಳ ಸಭ್ಯನಿದ್ದ. ಆದರೆ ತಾರುಣ್ಯದಲ್ಲಿ ಮಾತ್ರ ಅವನಿಗೆ ನೀತಿಯೆಂಬುದಿರಲಿಲ್ಲ. ಇಲ್ಲಿಗೆ ಸಿರಿವಂತನಾಗಿ ಬಂದು ಕೆಲವು ವರ್ಷಗಳಾದ ಮೇಲೆ ನನ್ನ ಕಂಪನಿಯ ಪಾಲುಗಾರನಾಗುವೆನೆಂದು ತಿಳಿಸಿದ. ಬಾಲ್ಯ ಸ್ನೇಹಿತನೆಂದು ನಾನು ಯಾವ ಅಡತಡೆಯನ್ನು ಮಾಡಲಿಲ್ಲ."

—ಎಂದು ನುಡಿಯುತ್ತಾ ಆನಂದಪ್ರಭುಗಳು ಉಸಿರುಗರೆದರು. ಬಹುಶ ಈಗಾಗಲೆ ಮಾತನಾಡಿ ದಣಿದಿದ್ದರೆಂದು ಕಾಣುತ್ತದೆ. "ಅಶ್ವತ್ಥರಾಯರ ಬಗ್ಗೆ ನೀವು ಮತ್ತೇನಾದರೂ ಹೇಳಲು ಸಾಧ್ಯವಿದೆಯೆ, ಆನಂದ ಪ್ರಭುಗಳೇ?" —ಶ್ರೀಧರ ಆಸೆಯನ್ನು ಬಿಡದೆ ಕೇಳಿದ. ಅದಕ್ಕೆ ಅವರು-

"ಅಶ್ವತ್ಥನ ತಂದೆ ಒಬ್ಬ ಸಾಲೆಯ ಮಾಸ್ತರರಿದ್ದರು. ಅವರದು ಮೊದಲಿನಿಂದಲೂ ಬಡತನದ ಜೀವನ. ಅವರ ಮನೆಯ ಬಲಗಡೆಯ

ನಮ್ಮ ಮನೆ. ನಮ್ಮ ಮನೆತನ ಆಗರ್ಭಶ್ರೀಮಂತರದು. ಅಶ್ವತ್ಥನಿಗೆ ಅಣ್ಣತಮ್ಮಂದಿರ ದೊಡ್ಡ ಬಳಗವಿತ್ತು. ನಾನು ಅವನು ಕೂಡಿಯೇ ಸಾಲೆಯನ್ನು ಕಲಿಯುತ್ತಿದ್ದೆವು. ಅವನ ತಂದೆ ತಾಯಿಗಳು ಬಹಳ ಆಚಾರಶೀಲರು. ಮಂತ್ರಘೋಷ ಮೊದಲಾದವು ಅವರ ಮನೆಯಿಂದ ದಿನಾಲು ಕೇಳಿಬರುತ್ತಿದ್ದವು. ಅಶ್ವತ್ಥ ಚಿಕ್ಕವನಿದ್ದಾಗ ಬಹಳ ಮುಗ್ಧ ವಿದ್ಯಾರ್ಥಿಯಾಗಿದ್ದ. ದೇವರಗುಡಿ ಮೊದಲಾದವನ್ನೆಲ್ಲ ಕಂಡಾಗ ಇದ್ದಲ್ಲಿಂದಲೇ ಸಾಷ್ಟಾಂಗವೆರಗುತ್ತಿದ್ದ. ಅವನ ಈ ವಿಚಿತ್ರ ಸ್ವಭಾವವನ್ನು ಕಂಡು ನವೆಲ್ಲಾ ಹಾಸ್ಯ ಮಾಡುತ್ತಿದ್ದೆವು. ಇದರಂತೆಯೆ ಅವನು ಮುಂದು ವರೆದಿದ್ದರೆ ಒಬ್ಬ ದೊಡ್ಡ ಸನ್ಯಾಸಿಯಾಗಬಹುದಿತ್ತು. ಆದರೆ ಭಗವದಿಚ್ಛೆ ಬೇರೆಯಾಗಿತ್ತು'' ಎಂದು ಹೇಳಿ ಜೋರಿನಿಂದ ಉಸಿರಾಡಿಸಹತ್ತಿದರು. ಸ್ವಲ್ಪ ಹೊತ್ತು ವಿಶ್ರಾಂತಿಯನ್ನು ತೆಗೆದುಕೊಂಡಾದ ಮೇಲೆ—

''ಅಶ್ವತ್ಥನ ತಂದೆಯದು ಕ್ರೂರಸ್ವಭಾವ. ಬಡತನ ಅವರನ್ನಾ ರೀತಿಯಾಗಿ ಮಾಡಿತ್ತೊ ಅಥವಾ ಅವರು ಸ್ವಭಾವತ ಕ್ರೂರರೋ ಹೇಳಲು ಸಾಧ್ಯವಿಲ್ಲ. ಹೆಂಡತಿಯನ್ನು ಕಾರಣವಿಲ್ಲದೆ ಹಿಂಸಿಸುತ್ತಿದ್ದರು. ಇದರಿಂದ ಪಾಪ ಅವಳು ಬೇಸತ್ತುಹೋಗಿದ್ದಳು. ಅಶ್ವತ್ಥ ದಿನಾಲು ಅಳುತ್ತ ಬಂದು ನಮಗೀಸುದ್ದಿಯನ್ನು ತಿಳಿಸುತ್ತಿದ್ದ. ನಾವಾದರೂ ಏನು ಮಾಡಲು ಸಾಧ್ಯವಿರಲಿಲ್ಲ. ದಿನ ದಿನಕ್ಕೆ ತಂದೆಯ ವಿಷಯವಾಗಿ ಅನಾದರ, ತಿರಸ್ಕಾರಗಳು ಅವನಲ್ಲಿ ಬೆಳೆಯುತ್ತಿದ್ದವು. ಪ್ರತಿಭಟಿಸುವ ಶಕ್ತಿ ಮಾತ್ರ ಇನ್ನೂ ಬಂದಿರಲಿಲ್ಲ. ಆದರೂ ಆಗಾಗ ಇವನು ತಂದೆಯ ಕ್ರೋಧಕ್ಕೆ ಎರವಾಗಿ ಬಡಿತವನ್ನು ತಿನ್ನುತ್ತಿದ್ದ. ಇವನು ದೊಡ್ಡವನಾದಂತೆ ಇವನ ಸಹನಶಕ್ತಿ ಒರೆಗಲ್ಲಿಗೆ ಹತ್ತುತ್ತಿತ್ತು. ತಂದೆಯನ್ನು ನನ್ನೆದುರಿಗೆ ದೂರಿ ಮಾತನಾಡುತ್ತಿದ್ದ. ನಾನೇ ಎಷ್ಟೋ ಸಲ ಅವನಿಗೆ ಸಮಾಧಾನವನ್ನು ಹೇಳುತ್ತಿದೆ. ಒಂದು ಪ್ರಸಂಗದಲ್ಲಂತು ಅಶ್ವತ್ಥನ ತಂದೆ ಹೆಂಡತಿಯನ್ನು ಸಿಟ್ಟಿನ ಭರದಲ್ಲಿ ವಿವೇಚನೆಯಿಲ್ಲದೆ ಕೋಲಿನಿಂದ ಥಳಿಸಿದ್ದ. ತಲೆ ಒಡೆದಿತ್ತು. ನಿಜವಾಗಿ ಅದು ರೋಮಾಂಚನೀಯ ಸಂಗತಿ.'' ಆನಂದಪ್ರಭುಗಳು ಸುಮ್ಮನಾದರು, ಅವರ ಆಳು ಕಾಫಿಯನ್ನು ತೆಗೆದುಕೊಂಡುಬಂದ ಕಾಫಿಯ ಸೇವನೆಯಾಯಿತು.

"ಅಂದು ಅಶ್ವತ್ಥನ ತಾಯಿಗೆ ಬಹಳ ಗಾಯವಾಗಿತ್ತು. ನಮ್ಮೆದುರಿಗೆ ಅಶ್ವತ್ಥ ಅಂದು ಅಳುತ್ತಲೆ ಬಂದು ಎಲ್ಲವನ್ನು ನಿವೇದಿಸಿಕೊಂಡ. ಅವನಿಗೆ ಎದೆಯೊಡೆದು ಹೋಗಿತ್ತು. ತನ್ನ ತಾಯಿ ಸತ್ತಿದ್ದಾಳೆಂದೆ ಅವನ ಭಾವನೆ ಡಾಕ್ಟರನನ್ನು ಕರೆದುಕೊಂಡು ಅವರ ಮನೆಯನ್ನು ತಲುಪಿದೆವು. ಡಾಕ್ಟರರು ಚಿಕಿತ್ಸೆಯನ್ನು ಮಾಡಿಹೋದ ಬಳಿಕ ಅವನ ತಂದೆ ನಿರ್ವಿಕಾರ ಚಿತ್ತದಿಂದ ಅಲ್ಲಿಗೆ ತಲುಪಿದರು. ಯಾವ ದುರ್ಘಟನೆಯು ನಡೆದಿಲ್ಲವೆಂಬಂತ್ತಿತ್ತು ಅವರ ಮನಸ್ಥಿತಿ. ಅಶ್ವತ್ಥನ ಕಣ್ಣಿನಲ್ಲಿ ತಂದೆಯನ್ನು ನೋಡಿ ಕ್ರೋಧಾಗ್ನಿ ಜ್ವಲಿಸುತ್ತಿತ್ತು. ಅಶ್ವತ್ಥ ಅವರೆದುರಿಗೆ ಹೋಗಿ ಬಾಯಿಗೆ ಬಂದಂತೆ ಅಂದ. ತಮ್ಮ ಮಗನ ಅಸೀಮ ಧೈರ್ಯವನ್ನು ಕಂಡು ವಿಸ್ಮಯವಾಯಿತವರಿಗೆ. ಆದರೂ ಪಿತ್ತ ಪ್ರಕೃತಿ ಅವರದು. ಮಗನನ್ನು ಹೊಡೆಯಲು ಮುಂದಾದರು. ಆದರೆ ನಾನೆ ಅವರನ್ನು ತಡೆದೆ. ಇಲ್ಲದಿದ್ದರೆ ಅಶ್ವತ್ಥ ಬದುಕುವ ಭರವಸೆಯಿರಲಿಲ್ಲ. ಹಾಯಸ್ಕೂಲಿನಲ್ಲಿದ್ದಾಗ ಅವನ ಮಾನಸಿಕ ಪರಿವರ್ತನೆಯಾಗಲು ಮೊದಲು ಮಾಡಿತು. ಒಮ್ಮೊಮ್ಮೆ ಸುಂದಾಗಿ ಕುಳಿತುಕೊಳ್ಳುತ್ತಿದ್ದ. ಒಮ್ಮೊಮ್ಮೆ ಅತಿ ಕ್ರೂರನಂತೆ ವರ್ತಿಸುತ್ತಿದ್ದ ನನ್ನೊಡನೆ ಸಹ ಎಷ್ಟೋ ಸಲ ಮರಟುತನದಿಂದ ವರ್ತಿಸುತ್ತಿದ್ದ. ಆಗ ನಾನು ಅವನಿಂದ ದೂರ ಸರಿಯುತ್ತಿದ್ದೆ. ಮುಂದೆ ಅವನೆ ರೋಧಿಸುತ್ತ ಬಂದು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಿದ್ದ. ಒಮ್ಮೆ ಅವನ ತಂದೆಯವರಿಗೆ ಜಡ್ಡಾಯಿತು. ಊರಿನಲ್ಲಿ ಕಾಲರಾ ಹಾವಳಿ. ನರಳಿ ನರಳಿ ಒಮ್ಮೆ ತೀರಿಕೊಂಡರು. ಅವನ ತಂಗಿಯೊಬ್ಬಳು ಸಹ ಇದೇ ಬೇನೆಯಲ್ಲಿ ಮರಣಿಸಿದಳು. ತರುವಾಯ ಅಶ್ವತ್ಥನ ತಾಯಿ ಅವನನ್ನು ತಮ್ಮ ತಂಗಿಯ ಮನೆಯಲ್ಲಿ ಕಲಿಯಲು ಇಟ್ಟುಬಂದರು. ಅವರ ಮನೆಯಲ್ಲಿಯೇ ಕೆಲಸ ಮಾಡಿಕೊಂದು ವಿದ್ಯೆಯನ್ನು ಕಲಿಯುತ್ತಿದ. ಪ್ರಾರಂಭದಲ್ಲಿ ಅವರು ವಿಶ್ವಾಸಾದರಗಳನ್ನು ತೋರಿಸುತ್ತಿದ್ದರು. ಆದರೆ ದಿನಗಳು ಕಳೆದಂತೆ ಕಿರಕಳವನ್ನು ಕೊಡಲು ಆರಂಭ ಮಾಡಿದರು. ಮನೆಯಲ್ಲಿಯ ಎಲ್ಲ ಕೆಲಸವನ್ನು ಇವನೆ ಮಾಡಬೇಕಾಗುತ್ತಿತ್ತು. ವೇಳೆ ಉಳಿದಾಗ ವಿದ್ಯೆಯನ್ನು ಕಲೆಯಬೇಕಾಗುತ್ತಿತ್ತು. ದಿನ ದಿನಕ್ಕೆ ಅವನ ಕಷ್ಟಗಳು ಉಲ್ಬಣಿಸಿದವು ಆಗೀಗ ನನಗೆ ಪತ್ರವನ್ನು ಹಾಕುತ್ತಿದ್ದ. ಅದರಲ್ಲಿ ತನ್ನ ದೀನತೆ, ಅಸಹಾಯತೆಯ ಅಳಲನ್ನು ತೋಡಿಕೊಂಡಿರುತ್ತಿದ್ದ. ಈ ಅಪರಿಮಿತ ಮಡಿ

ತದಿಂದಾಗಿ ಅವನಿಗೆ ಓದುವದು ಸಾಧ್ಯವಿರಲಿಲ್ಲ. ಅಲ್ಲಿ ಎರಡು ವರುಷ ಫೇಲಾದ. ಮನೆಯವರೆಲ್ಲ ಸಿಟ್ಟಾದರು. ಅಲ್ಲಿ ಅವನು ಹೊಡೆಯಿಸಿ ಕೊಳ್ಳುವದು ಸಹ ಪ್ರಾರಂಭವಾಯಿತು. ಪರಿಸ್ಥಿತಿ ಅವನನ್ನು ಕ್ರೂರ ರೀತಿಗೆ ತಳ್ಳುತ್ತಿತ್ತು. ಒಮ್ಮೆ ಅಲ್ಲಿಂದ ಓಡಿ ಬಂದ. ಬಹಳ ಸೊರಗಿ ಹೋಗಿದ್ದ ಪಾಪ. ಇಲ್ಲಿ ಅವನು ಕೆಲವು ದಿನ ಕಳೆಯುವ ಮೊದಲೆ ಮತ್ತೆ ಅವರು ಬಂದು ಪೂಸಲಾಯಿಸಿಕೊಂಡು ಕರೆದೊಯ್ದರು. ಬೇರೆ ಮಾರ್ಗವೇ ಇರಲಿಲ್ಲ. ಅವನಿಗೆ ಮತ್ತೆ ಗಾಣದೆತ್ತಿನಂತೆ ದುಡಿತ ಆರಂಭ ವಾಯಿತು. ಮುಂದೆ ಅವನ ಸಹನಶಕ್ತಿಯು ಕಟ್ಟು ಒಡೆಯಿತು. ಆಗೀಗ ಅವರಿಗೆ ಎದುರಾಡಲು ಪ್ರಾರಂಭಿಸಿದ. ಇದರಿಂದ ಅಲ್ಲಿಯವರ ಭಾಧೆ ಅಸಾಧ್ಯವಾಗಿ ಪರಿಣಮಿಸಿತು. ಇವನ ಮೇಲೆ ಅನೇಕ ಕಳವಿನ ಅಪರಾಧ ವನ್ನು ಹೊರಸಿದರಂತೆ. ಅಲ್ಲಿಂದ ತಿರುಗಿ ಓಡಿಬಂದ. ದೇಹ ಬಹಳ ಕೃಶವಾಗಿತ್ತು. ಇಲ್ಲಿ ಬಂದ ಕೆಲವು ದಿನಗಳ ಮೇಲೆ ಅವನಿಗೆ ಕಾಯಿಲೆ ಯಾಯಿತು. ಅದರಲ್ಲಿ ನರಳಿ ಹೊರಬಂದ ಅಶ್ವತ್ಥ ನವೀನ ಅಶ್ವತ್ಥನಾಗಿದ್ದ.

ಊರಲ್ಲಿಯ ತುಂಟ ಜನರ ತಂಡಕ್ಕೆ ಸೇರ್ಪಡೆಯಾದ. ಅವನ ಮೊದಲಿನ ಮೃದು ಸ್ವಭಾವ ಮಾಯವಾಗಿ ಅಲ್ಲಿ ರೌದ್ರತೆ ತಾಂಡವವಾಡು ತ್ತಿತ್ತು. ಮೊದಲು ನನ್ನನ್ನು ಮಾತನಾಡಿಸುತ್ತಿದ್ದವ ಅದನ್ನು ತ್ಯಜಿಸಿ ಬಿಟ್ಟ. ಯಾವದೋ ಒಂದು ಅಂಗಡಿಯಲ್ಲಿ ಕೆಲಸ ಮಾಡುತ್ತಿದ್ದ. ಅಲ್ಲಿಂದ ಹಣವನ್ನು ಹಾರಿಸಿಕೊಂಡು ಮಾಯವಾದ. ಮುಂದೆ ಎರಡು ಮೂರು ವರುಷ ಕಳೆದ ಮೇಲೆ ಬಂದ ಅವನು ಬದಲಾವಣೆಯ ಶಿಖರ ವನ್ನು ಮುಟ್ಟಿದ್ದ. ಹಣವನ್ನು ಬಹಳ ಧಾರಾಳವಾಗಿ ಖರ್ಚು ಮಾಡು ತ್ತಿದ್ದ. ಎಲ್ಲಿಂದ ಬರುತ್ತಿತ್ತೋ ಏನೋ? ಅದನ್ನು ನೋಡಿ ನನಗೂ ಒಮ್ಮೊಮ್ಮೆ ಆಶ್ಚರ್ಯವೆನಿಸುತ್ತಿತ್ತು. ಅವನ ತಾಯಿ ಸಹ ಸತ್ತಿದ್ದರು. ಈಗ ಅವನು ಪರೆ ಉಚ್ಚಿದ ಹಾವಿನಂತಾಗಿದ್ದ. ಊರಿನ ಹೆಣ್ಣುಮಕ್ಕಳ ವಿಷಯವಾಗಿ ಸಹ ಅವರ ತಂಡದ ದೃಷ್ಟಿ ಹರಿದಿತ್ತು. ಅದನ್ನು ತಡೆಯ ಲಾರದೆ ನಾನೊಂದುದಿನ– "ಅಶ್ವತ್ಥ ಈ ರೀತಿಯಾಗಿ ನಿನ್ನ ಉಪಟಳ ಹೆಚ್ಚುತ್ತ ನಡೆದರೆ ಊರವರು ನಿನ್ನನ್ನು ಉಳಿಯಗೊಡಲಿಕ್ಕಿಲ್ಲ. ಈಗಾ ಗಲೇ ನಿನ್ನಮೇಲೆ ಎಷ್ಟೋ ಜನ ಹಲ್ಲು ಕಡಿಯುತ್ತಿದ್ದಾರೆ." ಎಂದು ಬುದ್ಧಿವಾದ ಹೇಳಿದೆ.

"ಯಾರು ನನಗೇಂದರೇನು? ಊರವರಿಗೆ ನನ್ನ ಸುಖ ನೋಡಲು ಆಗಿರಲಿಕ್ಕಿಲ್ಲ. ಆದ್ದರಿಂದಲೇ ಈ ಕುಹಕ ನುಡಿಗಳನ್ನಾಡುತ್ತಿದ್ದಾರೆ. ನೀವು ಶ್ರೀಮಂತರು ಬಡವರನ್ನು ಯಾವಾಗಲೂ ತಿರಸ್ಕಾರ ದೃಷ್ಟಿಯಿಂದಲೇ ನೋಡುತ್ತೀರಿ" ಎಂದು ಅವನು ನನ್ನನ್ನು ತೀಕ್ಷ್ಣವಾಗಿ ನೋಡಿದ.

"ಶ್ರೀಮಂತರ ಮಾತು ಹೋಗಲಿ. ನೀನು ಬಡವರನ್ನಾದರೂ ಯಾಕೆ ಹಿಂಸಿಸುತ್ತಿ ಹೇಳು.?"

"ನಿನಗ್ಯಾರು ಹೇಳಿದರು ನಾನು ಬಡವರನ್ನು ಹಿಂಸಿಸುತ್ತೇನೆಂದು. ಹಿಂಸಿಸಿದರೂ ಅದು ಮೊದಲಿನ ಸೇಡಿನಿಂದ. ನಾವು ಬಡತನದಿಂದಿರುವಾಗ ಯಾರಾದರೂ ಸಹಾಯ ಮಾಡಿದರೆ?"

"ಅವರು ನಿನಗೆ ಸಹಾಯ ಮಾಡಲಿಲ್ಲವೆಂಬ ಉದ್ದೇಶದಿಂದ ಈ ರೀತಿಯಾಗಿ ಆಚರಿಸುವದು ತಪ್ಪು. ಸೇಡಿಗೆ ಪ್ರತಿಸೇಡು ಸಭ್ಯತನದ ಲಕ್ಷಣವಲ್ಲ." ನಾನು ಚುರುಕಾಗಿಯೇ ಅವನಿಗೆ ಹೇಳಿದೆ. "ಸಭ್ಯತನವಂತೆ—ಸಭ್ಯತನ" ಎಂದು ಅವನು ಮಾರ್ಮಿಕವಾಗಿ ನಕ್ಕು—

"ಅದು ಶ್ರೀವಂತರಿಗೆ ಮಾತ್ರ ಹಿತವಾದದ್ದು. ಅದೊಂದು ಸೋಗಿನ ಶಬ್ದ. ಹಣವಂತರಿಗೆ ಎಷ್ಟೋ ಕೃತ್ಯಗಳನ್ನು ಮುಚ್ಚಿ ಮಾಡಲು ಅದೊಂದು ತೆರೆ" ಅಶ್ವತ್ಥ ಎಷ್ಟುಹೇಳಿದರೂ ಕೇಳದೆ ತಾನೇ ಅಲ್ಲಿಯ ನಿರಂಕುಶ ಪ್ರಭುವಿನಂತೆ ಉದ್ದಾಮತನದಿಂದ ವರ್ತಿಸಿದ. ನನ್ನ ಯಾವ ಮಾತನ್ನು ಕೇಳದೆ ನನ್ನನ್ನು ತಿರಸ್ಕರಿಸಿ ಮಾತನಾಡಿದ. ಅಂದಿನಿಂದ ಅವನ ವಿಷಯವನ್ನೇ ತ್ಯಜಿಸದೆ. ಒಮ್ಮೆ ನಮ್ಮ ಮನೆ ಕಳುವಾಯಿತು. ಅಶ್ವತ್ಥನ ಮನೆಯಲ್ಲಿ ಕಳುವಾದ ಮಾಲು ದೊರೆಯಿತು. ಅಲ್ಲಿಂದ ಓಡಿಹೋದ ಆವನು ತಿರುಗಿ ಬರಲಿಲ್ಲ. ನನಗಾದರೂ ಅವನ ನೆನಪು ಅಳಿಸಿಹೋಗಿತ್ತು. ಮುಂದೆ ಅವನಿಗೂ ನನಗೂ ಅಕಸ್ಮಾತಾಗಿ ಭೆಟ್ಟಿಯಾಯಿತು. ನನ್ನ ವ್ಯವಹಾರದಲ್ಲಿ ತಾನು ಪಾಲುಗೊಳ್ಳಲು ಬಂದ. ನಾನು ನಿರಾಕರಿಸದಾದೆ. ನಮ್ಮ ಬಾಲ್ಯದ ಎಷ್ಟೋ ದಿನಗಳನ್ನು ನೆನೆಸಿಕೊಂಡು ಅವನು ನಾನು ವ್ಯಥೆಪಟ್ಟಿದ್ದೇವೆ, ಹರ್ಷಿಸಿದ್ದೇವೆ. ಆದರೆ ಅವನದು ಈ ರೀತಿ ದಾರುಣವಾದ ಹತ್ಯೆಯಾಯಿತು."

''ಆನಂದ ಪ್ರಭುಗಳೆ, ಅಶ್ವತ್ಥರಾಯರ ತಾರುಣ್ಯದ ದಿನಗಳನ್ನಾದರೂ ಬಲ್ಲಿರಾ?''

''ಎಷ್ಟೋ ಸಲ ಈ ವಿಷಯವಾಗಿ ಅವನನ್ನು ಕೇಳಿದ್ದೇನೆ. ಆದರೆ ಒಂದು ದಿನವಾದರೂ ಆತ ಅವನ್ನು ತಿಳಿಸಲಿಲ್ಲ. ಇದರಿಂದ ನಿಮಗೇನಾದರೂ ಸಹಾಯವಾಗಬಹುದೆ?''

''ಓಹೋ ಬೇಕಾದಷ್ಟು ಸಹಾಯವಾಗುತ್ತದೆ. ಮುಖ್ಯವಾಗಿ ನಮಗೆ ಅವರ ಜೀವನದ ಪರಿಚಯ ಬೇಕಾಗಿತ್ತು. ಅವರನ್ನು ಮೊನ್ನೆಯವರೆಗೆ ಯಾರೋ ಬ್ಲ್ಯಾಕಮೇಲ ಮಾಡುತ್ತಿದ್ದರು?''

''ಬ್ಲ್ಯಾಕಮೇಲ ಮೊನ್ನೆಯವರೆಗೆ!........ಮೊನ್ನೆಯವರೆಗೆ!"

—ಆನಂದ ಪ್ರಭುಗಳು ಅಮಿತ ಅಚ್ಚರಿಯಿಂದ ಅಂದರು.

''ನಿಮಗೆ ಆ ವಿಷಯ ತಿಳಿದಿರಲಿಲ್ಲವೇ?"

—ಶ್ರೀಧರ ಅಷ್ಟೆ ಚಕಿತ ಮುದ್ರೆಯಿಂದ ಕೇಳಿದ.

''ಇಲ್ಲ. ಅಶ್ವತ್ಥ ಈ ವಿಷಯವಾಗಿ ನನಗೇನೂ ತಿಳಿಸಿರಲಿಲ್ಲ. ಬಹಳ ವಿಚಿತ್ರ ವ್ಯಕ್ತಿ ಅವನು.''

''ನಿಮ್ಮಿಂದ ನನಗೆ ಬಹಳ ಸಹಾಯವಾಯಿತು ಆನಂದ ಪ್ರಭುಗಳೆ" ಕೃತಜ್ಞತೆಯಿಂದ ಅವರಿಗೆ ನಮಸ್ಕರಿಸಿದ.

''ಇದೇನು ಸಹಾಯ ಬಿಡಿ. ನನಗೆ ತಿಳಿದಿದ್ದನ್ನು ನಿಮಗೆ ತಿಳಿಸಿದ್ದೇನೆ.''

ಶ್ರೀಧರ ಹೊರಗೆ ಬಂದಾಗ ಅವನ ಮನದಲ್ಲಿ ಆನಂದ ಪ್ರಭುಗಳ ಭವ್ಯ ಆಕೃತಿ ನೆಲೆಸಿತ್ತು. ಈ ವ್ಯಕ್ತಿ ಬ್ಲ್ಯಾಕಮೇಲಿನ ವಿಷಯ ಅರಿಯೆನೆಂದು ಹೇಳುತ್ತಾನೆ. ಇದೇನು ನಟನೆಯೋ? ನಾರಾಯಣ ಆ ವಿಷಯವನ್ನು ಕೇಳಿದ್ದೇನೆಂದು ಹೇಳುತ್ತಾನೆ. ಇದು ಸಹ ನಾರಾಯಣನದೇ ಮೋಸ. ಶ್ರೀಧರ ಕಾರನ್ನು ಡ್ರ್ಯಾವ ಮಾಡಿಕೊಂಡು ಬಂದಾಗ ಅವನಿಗಾಗಿ ಒಂದು ಕುತೂಹಲದ ಸಂಗತಿ ಕಾದಿತು.

— ೭ —

ಹೋಟೆಲಿನಲ್ಲಿ ಇಸ್ಪಿಟಾಟ ಒಳ್ಳೇ ಜೋರಿನಿಂದ ಪ್ರಾರಂಭವಾಗಿತ್ತು. ಒಳ್ಳೇ ಕುತೂಹಲಕ್ಕೆಡೆಮಾಡಿಕೊಟ್ಟಿತ್ತು. ದಿನಾಲು ತಮ್ಮ ಮನಬಂದಂತೆ ಚೀರಾಡುವವರು ಬಹಳ ಸೌಮ್ಯದಿಂದ ಕಬ್ಬಿಗನೊಬ್ಬ ನಿಸರ್ಗ ನಿರೀಕ್ಷಣೆಯಲ್ಲಿ ತನ್ನತನವನ್ನು ಮರೆತು ತನ್ಮಯನಾದಂತೆ ಆಟಗಾರರು ಆಟದಲ್ಲಿ ಲೀನರಾಗಿದ್ದರು. ಮೌನ ಸರ್ವತ್ರ ಸ್ವಚ್ಛಂದ ಅಧಿಕಾರಿಯಂತೆ ರಾಜ್ಯವಾಳುತ್ತಿತ್ತು. "ಓಹೋ, ಇದು ಕಡೆಗೆ ನನ್ನದೆ ಆಯಿತು" ಎನ್ನುತ್ತ ನಾಲ್ವರಲ್ಲಿ ಒಬ್ಬ ಮೇಜಿನಮೇಲಿದ್ದ ಹಣವನ್ನು ಕೈ ಚಾಚಿ ತನ್ನೆಡೆಗೆ ಬಳಿದುಕೊಂಡ.

"ನಿಲ್ಲು, ನಿಲ್ಲು ರಾಜಾರಾಮ. ಹುಕುಂ ಪೇರ ನನ್ನೆಡೆಗೆ ಇವೆ." ಎಂದು ಎಲೆಗಳನ್ನು ತೋರಿಸಿ ಎಲ್ಲರನ್ನು ನೋಡಿ ಮರ್ಮಭೇದಕವಾದ ನಗೆಯನ್ನು ಬೀರಿಧ. ರಾಜಾರಾಮ ಅವನ ಎಲೆಗಳನ್ನು ನೋಡಿ ಮುಖ ನೆಟ್ಟಗೆ ಮಾಡಿ ತನ್ನೆದುರಿಗಿದ್ದ ಹಣವನ್ನು ವಿಷಾರಿ ಹಾವನ್ನು ಕೋಲಿನಿಂದ ಸರಿಸುವಂತೆ ಸರಿಸಿದ. ತನ್ನನ್ನು ಸೋಲಿಸಿದ ವ್ಯಕ್ತಿಯ ಕಡೆಗೊಮ್ಮೆ ಕ್ರೂರವಾದ ದೃಷ್ಟಿಯನ್ನೂ ಬೀರಿದ. "ನಿಂದೆನೋ ಇದರಲ್ಲಿ ಮೋಸವಿದೆ ಜಾನ್" ಎದುರುಗಡೆಯವನಂದ.

"ಹೋಗೋ, ಹೋಗೋ ಹಣ ಗಳಿಸುವ ಯೋಗ್ಯತೆ ಇಲ್ಲದಿದ್ದರೆ ಕೆರೆಯೋ ಭಾವಿಯೋ ನೋಡು. ಮೋಸವಂತೆ ಮೋಸ"—ಜಾನ ಉಕ್ಕಿ ಬಂದ ಕ್ರೋಧದಲ್ಲಿ ಮಾತನಾಡಿದ.

"ಯಾಕೋ ಬಾಯಿಗೆ ಬಂದ ಹಾಗೆ ಮಾತಾಡ್ತಿ."

"ನೀನ್ಯಾರೋ ಧೀಮಾಕು ಮಾಡುವ ಸರದಾರ. ಕೈಕಾಲು ಚೆನ್ನಾಗಿರಬೇಕೆಂದರೆ ಕೂಡು ಇಲ್ಲದಿದ್ದರೆ ಎದ್ದು ಹೋಗು."

"ಎದ್ದು ಹೋಗು ಎನ್ನಲು ಇದೇನು ನಿಮ್ಮಪ್ಪನ ಸ್ಥಳವಲ್ಲ. ನಾನು ಇಲ್ಲಿಯೇ ಕೂಡ್ರುವವ."

--ಸಿಟ್ಟಿನಿಂದ ಸಿಡಿದು ಹೇಳಿದ ಅವನು.

“ಏ ನಾಯಿ ಎಷ್ಟು ಸೊಕ್ಕೋ” ಎಂದು ಜಾನ ಇದಿರಿದ್ದವನನ್ನು ಹೊಡೆಯಲು ಕೈಯೆತ್ತಿದ. ಸುತ್ತಲಿದ್ದವರು ಅವನ ಆವೇಶಕ್ಕೆ ಬ್ರೇಕ್ಕು ಹಾಕಿದರು. ಎದುರುಗಡಿಯುವನು ಇದಕ್ಕೆ ಸಿದ್ಧನಾದವನಂತೆ ತೋಳು ಏರಿಸಿದ್ದ. ಅಷ್ಟರಲ್ಲಿಯೇ ಒಳಗಿನ ಗದ್ದಲವನ್ನು ಕೇಳಿ ಹೊರಗಿನಿಂದ ಯಜಮಾನ ಬಂದ. “ಏನಿದು ಜಾನ, ರಾಜಾರಾಮ ನಾನು ಸಾವಿರ ಸಲ ಹೇಳಿದರೂ ನಿಮಗೆ ಬುದ್ಧಿ ಬರುವಂತೆ ಕಾಣುವದಿಲ್ಲ. ಆಟ ಬೇಡಾದರೆ ಎದ್ದು ಹೋಗಿ ಇಲ್ಲದ ಗದ್ದಲವೆಬ್ಬಿಸಬೇಡಿ. ನಾಚಿಕೆಯಿಲ್ಲದ ಕತ್ತೆಗಳು ಎಷ್ಟು ಹೇಳಿದರೂ ಅಷ್ಟೆ” ಎನ್ನುತ್ತ ಯಜಮಾನ ಬಾಯಿಗೆ ಬಂದುದನ್ನು ನುಡಿದು ಹೊರಟುಹೋದ. ಈಗ ನಿಜವಾಗಿ ಎಲ್ಲರೂ ನಾಯಿಯಂತೆ ಕುಳಿತುಕೊಂಡಿದ್ದರು. ಅವನು ಎಷ್ಟು ಅಂದರೂ ಅನ್ನಿಸಿಕೊಳ್ಳುವದೆ ಅವರಿಗೆ ಮಾರ್ಗ. ಅವನಿಗೆ ಎದುರಾಡಿ ತಿರುಗಿ ಇಲ್ಲಿಗೆ ಬರುವಂತಿರಲಿಲ್ಲ. ಒಬ್ಬರ ಮೋರೆಯನ್ನೊಬ್ಬರು ಮಿಕಿ ಮಿಕಿ ನೋಡುತ್ತ ಕುಳಿತುಕೊಂಡಿದ್ದರು. “ಜಾನ ನಾನೆಷ್ಟು ಹೇಳಿದರೂ ನೀನು ಮತ್ತೆ ಯಥಾವಿಧಿಯಾಗಿಯೇ ವರ್ತಿಸುತ್ತಿ. ಇದರಿಂದ ನಮಗೆಲ್ಲಿ ಕಲ್ಲುಬೀಳುವದು.” —ರಾಜಾರಾಮ ಅಸಹನೆಯಿಂದ ನುಡಿದ.

“ನಾನೇನಯ್ಯಾ ಮಾಡಿದ್ದು. ಸೋಲು ಎಂದು ನಾನು ಅವನಿಗೆ ಹೇಳಿದ್ದೇನು? ದಿನಾಲು ಜಯ ಸಂಪಾದಿಸುವ ಆವನು ಇಂದುಸೋತಾಗ ಇಷ್ಟೇಕೆ ಹಾರಾಡಬೇಕು. ನಮಗೇನು ಸೋಲಲು ಆಕಾಶದಿಂದ ಹಣ ಉದರುವವೇನು?”

—ಅಷ್ಟೆ ಅಸಹನೆಯಿಂದ ಜಾನ ರಾಜಾರಾಮನ ಮೇಲೆ ಅವನ ಆಪಾದನೆಯನ್ನು ಅಲ್ಲಗಳೆದು ಹರಿಹಾಯ್ದ.

“ಇರಲಿ ಬಿಡಿ ನಾನೇನು ಎಲೆ ಹಂಚಲೋ ಅಥವಾ ಇಲ್ಲಿಗೆ ಬಿಡಲೋ?”

“ಎಲೆ ಹಂಚು ರಾಮಯ್ಯ. ಆಟ ಪ್ರಾರಂಭವಾಗಿ ಈಗ ಒಂದು ತಾಸು ತಾನೆ ಕಳೆಯಿತು.”

—ರಾಜಾರಾಮ ಆಟದಲ್ಲಿಯ ತನ್ನ ಆದರವನ್ನು ಸಾದರಪಡಿಸಿದ. ದಿನಾಲು ಇದೇ ರೀತಿ ಗೆದ್ದವರ ಹಾರಾಟ, ಸೋತವರ ಹೋರಾಟ. ಹತ್ತು ಹತ್ತು ನಿಮಿಷಕ್ಕೊಮ್ಮೆ ಎಲೆಯಡಿಕೆಯನ್ನು ಹಾಕಿಕೊಂಡು ಪಿಚ್ಚನೆ

ಉಗುಳುತ್ತಿದ್ದರು. ಹೊಗೆಯಂತೂ ಒಬ್ಬರ ಮುಖ ಮತ್ತೊಬ್ಬರಿಗೆ ಕಾಣ ದಂತೆ ಆ ತಾಣವನ್ನು ಬಿಳಿಯ ಆವರಣದಿಂದ ಆಚ್ಛಾದಿಸುತ್ತಿತ್ತು. ಸುಮಾರು ಎರಡು ಮೂರುಗಂಟೆಯವರೆಗೆ ಆಟ ನಿರಾತಂಕವಾಗಿ ಮುಂದ್ವ ವರೆಯಿತು. ಆದರೆ ಮುಂದೆ ರಾಜಾರಾಮನ ಕಿಸೆ ಬರಿದಾಯಿತೆಂದು ಕಾಣುತ್ತದೆ. ಆಟದಮೇಲೆ ಅಭಿರುಚಿ ಉಳಿದಂತೆ ಕಾಣಲಿಲ್ಲ.

"ಸಾಕಯ್ಯಾ ಇಂದು ಇಲ್ಲಿಗೆ."-ಎಂದು ಆಟಕ್ಕೆ ತನ್ನ ನಕಾರವನ್ನು ಸೂಚಿಸಿದ.

"ಯಾಕೋ ರಾಜಾರಾಮ ಹುರುಪಿನ ಆಟಗಾರ ನೀನು ಮುಗಿ ಯಿತೆ ಇಲ್ಲಿಗೆ ನಿನ್ನ ಆಟ."

—ಜಾನ ತಾನು ಗೆದ್ದ ಉತ್ಸಾಹದಿಂದ ಅವನನ್ನು ಪ್ರೋತ್ಸಾಹಿಸಲು ಕೇಳಿದ.

ಆಟಗಾರರೆಲ್ಲ ರಾಜಾರಾಮನ ಹಿಂದೆ ಹೊರಬಿದ್ದರು.

"ಇಂದು ಬಹಳ ಹಣ ಹೋಯಿತು ನೋಡು ರಾಜಾರಾಮ.'' ಅವನ ಸಂಗಡಿ ರಾಮಯ್ಯ ತನ್ನ ಗೆಳೆಯನಲ್ಲಿ ತನ್ನ ಅಳಲನ್ನು ತೋಡಿ ಕೊಂಡ. "ಏನು ನುರಿತ ಆಟಗಾರ ಹೀಗೆ ಹಲುಬಿದರೆ ಉರುಳಿದ ಹಾಲಿ ಗಾಗಿ ನರಳಿ ಫಲವೇನು?''

"ಆದರೂ ಇಂದು ತುಂಬ ನಿರಾಶೆಯಾಗಿದೆ. ಎರಡು ಮೂರದಿನ ವಾಯಿತು. ಆಶೆಯಿಂದ ತಿರುಗಿ ಬರುವೆ. ಆ ಮೇಲೆ ಚಡಪಡಿಸುತ್ತ ತೆರಳುವೆ.''

—ಎಂದು ರಾಮಯ್ಯನ ಧ್ವನಿ ನಿರಾಶೆಯ ಆಳದಿಂದ ಗೆಳೆಯನ ಸಹಾನುಭೂತಿಯನ್ನು ದೊರಕಿಸಲು ಹೊರಬಂದಿತು. "ರಾಮಯ್ಯ ಆಶೆ ಯೆನ್ನುವದು ಕೆಟ್ಟದು ನೋಡು. ಫಲಾಪೇಕ್ಷೆ ಮಾಡಬಾರದು ಮನುಷ್ಯ. ಕರ್ಮಣ್ಯೆ ವಾಧಿಕಾರಸ್ತೆ ಮಾ ಫಲೇಸು......''

"ಇರಲಿ ಬಿಡಯ್ಯಾ ಸಾಕುಮಾಡು ನಿನ್ನ ತುಣಕು ವೇದಾಂತ. ಬಾಯಿ ತೆರೆದರೆ ಅದೊಂದು ಶ್ಲೋಕ. ರಾಜಾರಾಮ ಅವನನ್ನು ನೋಡಿ ಮುಗುಳ್ನಗೆ ನಕ್ಕ ಮಾತ್ರ.

"ರಾಮಯ್ಯ ಹೊಸಬ ಯಾರವನು?''

"ಯಾವ ಹೊಸಬ" ರಾಮಯ್ಯ ತಬ್ಬಿಬ್ಬಾಗಿ ಕೇಳಿದ. ''ಅವನೇ ಈಗೀಗ ಆಟಕ್ಕೆ ಬರುತ್ತಾನಲ್ಲಾ."

‘‘ಓಹೋ ಆವನೇ ಸುಬ್ರಹ್ಮಣ್ಯ. ಅವನಮೇಲೇಕೆ ನಿನ್ನ ಕಣ್ಣು.”

‘‘ಹಾಂ, ಹಾ. ಅದೆ ಸುಬ್ರಹ್ಮಣ್ಯ. ಇಷ್ಟು ಸಲ ಹಣವನ್ನು ಸೋತರೂ ಚಕಾರ ಸುದ್ದಿಯೆತ್ತುವದಿಲ್ಲ ಒಳ್ಳೆಯ ರಸಿಕ ವ್ಯಕ್ತಿಯಾಗಿ ಕಾಣುತ್ತಾನೆ.’’

‘‘ಅವನೇನಪ್ಪಾ ಸುಖಪುರುಷ. ಹೆಂಡತಿ ತಂದು ಹಾಕುತ್ತಾಳೆ. ಈತ ಹಾಳು ಮಾಡುತ್ತಾನೆ.

‘‘ಅವನ ಹೆಂಡತಿಗೆಲ್ಲಿ ಕೆಲಸ ರಾಮಯ್ಯ” ತನ್ನ ಕುತೂಹಲವನ್ನು ತಡೆಯಲಾರದೆ ಕೇಳಿದ.

‘‘ಯಾಕೆ ಅತ್ತ ಕಣ್ಣು ಹೊರಳಿಸಿದಿರಿ.”—ರಾಮಯ್ಯ ವ್ಯಂಗ್ಯ ಧ್ವನಿಯಿಂದ ಕೇಳಿದ.

‘‘ಛೆ, ಛೆ ನಿನ್ನನ್ನು ಒಲಿಸುವದು ಕಠಿಣ. ಯಾವದಕ್ಕಾದರೂ ನೀನು ಅಪಾರ್ಥವನ್ನು ಮಾಡಿಕೊಳ್ಳುವಿ.’’ ಅವನು ಖರ್ಚು ಮಾಡುವ ರೀತಿ ಕಂಡರೆ ಅವನ ಹೆಂಡತಿ ಒಳ್ಳೆಯ ಪಗಾರವಿರುವಂತಿದೆ.’’

‘‘ತನ್ನ ಹೆಂಡತಿ ಯಾರದೋ ಮನೆಯಲ್ಲಿ ಕೆಲಸ ಮಾಡುತ್ತಾಳೆಂದು ಅವನೆ ಹೇಳಿದ.”

‘‘ನೀನು ತಪ್ಪು ತಿಳಿದುಕೊಂಡಿರಬಹುದು ರಾಮಯ್ಯ.’’

‘‘ನನಗ್ಯಾಕೆ ಉಳಿದವರ ಸುದ್ದಿ. ಅವನು ಎಷ್ಟು ಹೇಳಿದನೋ ಅಷ್ಟೆ ನಿನ್ನೆದುರಿಗೆ ಹೇಳಿದೆ. ಸುಳ್ಳುಹೇಳಲೇನು ಇದು ಸ್ವಂತವಿಷಯವೇ?”

—ರಾಮಯ್ಯ ಸಿಡುಕಿನ ಸ್ವರದಿಂದ ತನ್ನ ಗೆಳೆಯ ತನ್ನ ಮೇಲೆ ಮಾಡಿದ ಆಪಾದನೆಯನ್ನು ಖಂಡಿಸಿದ. ರಾಜಾರಾಮ ಅವನನ್ನು ಸಾಂತ್ವ ನಗೊಳಿಸಿದ. ರಾಜಾರಾಮನ ಮನದಿಂದ ಸುಬ್ರಹ್ಮಣ್ಯ ಮರೆಯಾಗಿರಲೆ ಇಲ್ಲ. ಸುಬ್ರಹ್ಮಣ್ಯನ ರಹಸ್ಯವಾದ ಕತೆ ರಾಜಾರಾಮನಿಗಾಗಿ ಕಾಯು ತ್ತಿತ್ತು.

ಸಂಜೆಯ ಪ್ರಶಾಂತವಾದ ಸಮಯದಲ್ಲಿ ವೀಣಾ ಕಾರಿನಲ್ಲಿ ಸಂಚಾರಿ ಯಾಗಿ ತೆರಳಿದ್ದಳು. ವಾತಾವರಣ ನಿಜವಾಗಿ ಸ್ಫೂರ್ತಿಯುತವಾಗಿತ್ತು. ವೀಣಾಳಾದರೂ ಈಗೀಗ ಹೊರಗೆಯೆ ತೆರಳಿರಲಿಲ್ಲ. ಮನೆಯಲ್ಲಿ ಒದ್ದು ತ್ತ ಬೇಸರ ಬಂದದ್ದರಿಂದ ಈ ಸೊಬಗನ್ನು ಸವಿಯುವ ಉದ್ದೇಶದಿಂದ

ತನ್ನ ಬೇಸರವನ್ನು ನೀಗಲು ತೆರಳಿದ್ದಳು. ಸೃಷ್ಟಿ ಬಂಗಾರದ ಬಣ್ಣದ್ದಾಗಿ ಶೋಭಿಸುತ್ತಿತ್ತು. ಸೂರ್ಯನ ಮಂದ ಕಿರಣಗಳು ಮಾಯವಾಗುತ್ತ ನಡೆದಿದ್ದವು. ಕರ್ಮಯೋಗಿ ರವಿ ತನ್ನ ಕಾರ್ಯ ಪೂರೈಸಿ ಬೇರೆಡೆಗೆ ತೆರಳುವ ಸಿದ್ಧತೆಯಲ್ಲಿದ್ದ. ಮಕ್ಕಳು ನಗುತ್ತ ಕೆಲೆಯುತ್ತ ಸಂತಸದ ಪ್ರತೀಕದಂತೆ ನಡೆದಿದ್ದರು. ದುಡವು ದಣಿತಗಳ ಪರಿಹರಿದು ದಾಸ್ಯ ಶೃಂಖಲೆಯನ್ನು ತ್ಯಜಿಸಿ, ಹೊಸ ಸ್ವಾತಂತ್ರ್ಯದ ಹುಮ್ಮನಸ್ಸಿನೊಡನೆ ಮಿಲ್ಲಿನ ಕೆಲಸಗಾರರು ನಗುತ್ತ ಬರುತ್ತಿದ್ದರು. ಸಂಜೆ ಮುಂಜಾವು ನಿಸರ್ಗದ ಅಮೂಲ್ಯ ಕಾಣಿಕೆಗಳು ನಿಸರ್ಗದಣುಗಳಾದ ಮಾನವರಲ್ಲಿ, :ಮೃಗಗಳಲ್ಲಿ ಸಂಜೀವಿನಿಯನ್ನು ತುಂಬುವಂತಹಗಳು. ಸಂಧ್ಯೆಯ ಸೊಬಗನ್ನು ಸವಿಯುವ ಉದ್ದೇಶದಿಂದ ಕೋಲನ್ನೂರುತ್ತ ಬಾಳ್ಸಂಜೆಯಲ್ಲಿದ್ದವರು ತಮ್ಮ ತಾರುಣ್ಯದ ಸವಿಗನಸುಗಳನ್ನು ನೆನಪಿಗೆ ತಂದುಕೊಳ್ಳುತ್ತ ಸಾಗಿದ್ದರು. ತಂಗಾಳಿ ಕಾರಿನ ಕಿಟಕಿಗಳಿಂದ ಸುಳಿದು ಬಂದಾಗ ವೀಣಳಿಗೆ ಯಾವದೋ ಸ್ವಪ್ನ ಸೌಖದಲ್ಲಿ ತೆರಳಿದಂತಾಗುತ್ತಿತ್ತು. ಮುಂಗುರಳನ್ನು ಎಡಗೈಯಿಂದ ತೀಡಿಕೊಳ್ಳುತ್ತಿದ್ದಳು. ಆದರೆ ಅದು ಕೇಳದೆ ಹಣೆಯ ಮೇಲೆ ಅತ್ತಿತ್ತ ಹಾರಿದಾಡುತ್ತಿತ್ತು. ನೀಲಿಯಾಗಸದಲ್ಲಿ ಹಕ್ಕಿಗಳು ಅಂದಿನ ತಮ್ಮ ದುಡಿಮೆಯನ್ನು ವಿಮರ್ಶಿಸುತ್ತ ತಮ್ಮ ಎಳೆಯ ಕಂದಮ್ಮಗಳನ್ನು ನೋಡುವಾಸೆಯಿಂದ ಗುಂಪು ಗುಂಪಾಗಿ ಸಾಗಿದ್ದವು. ಆಗೀಗ ಎದುರಿನಲ್ಲಿ ಕಾರು ಹಾರ್ನ ಬಾಗಿಸಿದಾಗ ಎಚ್ಚರಗೊಂಡವಳಂತೆ ಅವಕ್ಕೆ ದಾರಿ ಮಾಡಿಕೊಡುತ್ತಿದ್ದಳು. ಊರನ್ನು ದಾಟಿ ಬಂದಿದ್ದಳು. ಎಡಬಲದಲ್ಲಿ ಒಂದೊಂದರಂತೆ ಸರಿದುಹೋಗುತ್ತಿದ್ದ ಹೆಮ್ಮರಗಳನ್ನು ನೋಡಿದಳು. ಮುಂದೆ ನೀಳವಾದ ಡಾಂಬರ ರಸ್ತೆ ಭಾರವಾದ ಪ್ರಾಣಿಯನ್ನು ನುಂಗಿ ಮಿಸುಕಲಾರದೆ ಸುಖನಿದ್ರೆಯನ್ನು ಮಾಡುತ್ತಿರುವ ಹೆಬ್ಬಾವಿನಂತೆ ಬಿದ್ದುಕೊಂಡಿತ್ತು. ಎಡಗೈಯಿಂದವಳು ಸ್ಟಿಯರಿಂಗ ಹಿಡಿದು ಬಲಗೈಯನ್ನು ಕಿಟಕಿಯ ಹೊರಗೆ ಹಾಕಿ ಸಣ್ಣ ಮಕ್ಕಳಂತೆ ಅಲ್ಲಾಡಿಸುತ್ತಿದ್ದಳು ಸಣ್ಣ ಮಕ್ಕಳಂತೆ ಕುಣಿದಾಡಬೇಕು, ಹಕ್ಕಿಯಂತೆ ರೆಕ್ಕೆ ಬಿಚ್ಚಿ ಬಾನಿನಲ್ಲಿ ಬಹುದೂರ ಬಹುದೂರ ನಲಿಯಬೇಕೆಂಬ ಆಶೆ ಅವಳಿಗೆ.

ಎಲೆ ಹಕ್ಕಿ ಹರ್ಷವೇನೆಂಬುದನೆನಗೆ ತಿಳಿಸು.

ನೀನು ಸವಿದಿರುವ ಆ ಸುಖಗನಸನೆನಗೆ ಉಣಿಸು.–ಶೆಲ್ಲಿಯು ತನ್ನ ಕವನದಲ್ಲಿ ತೆಗೆದ ಉದ್ಗಾರಗಳು ಅವಳ ನೆನಪಿಗೆ ಬಂದವು. ಪೆಟ್ರೋಲು ಮುಗಿಯುವವರೆಗೆ ಆಜ್ಞಾಧಾರಕವಿದ್ದ ಕಾರು ಏರಿಯನ್ನು ಗುಂಯಗು ಡುತ್ತ ನಮ್ರ ಸೇವಕನಂತೆ ಏರುತ್ತಿತ್ತು. ವೀಣಾ ಈ ರೀತಿ ಸ್ವಪ್ನಸ್ವರ್ಗ ದಲ್ಲಿ ಓಲಾಡುತ್ತಿರುವಾಗ ಎದುರಿನಿಂದ ಅತ್ಯಂತ ರಭಸದಿಂದ ಒಂದು ಕಾರು ಬಂದಿತು. ಅದಕ್ಕೆ ಸೈಡು ತೋರಿಸಲು ಅವಕಾಶವಿರಲಿಲ್ಲ. ಅಷ್ಟು ವ್ಯವಧಾನವು ಇರಲಿಲ್ಲ ವೀಣಳಿಗೆ. ಇನ್ನೇನು ಅದು ಇವಳ ಕಾರಿಗೆ ಹಾದು ನುಚ್ಚು ನುರಿಯಾಗಿ ಸಾವಿನ ತೊಟ್ಟಿಲಲ್ಲಿ ಇವಳು ಅವರು ಪವಡಿಸಬೇಕು! ಆವರೆ ಆ ರೀತಿಯಾಗದೆ ಆ ಕಾರು ಅತಿ ಪ್ರಯಾಸದಿಂದ ಬೇರೆಡೆಗೆ ಹೋಯಿತು. ವೀಣಾ ಮುಂದಾಗುವದನ್ನು ಗ್ರಹಿಸಿ ಚಿಟ್ಟನೆ ಚೀರಿದಳು. ಸ್ಟಿಯರಿಂಗನ್ನು ಬಿಗಿಯಾಗಿ ಹಿಡಿದಳು. ಕಾಲು ಕೆಳಗಿನ ಪೆಡಲನ್ನು ಜೋರಾಗಿ ಒತ್ತಿತು. ಆ ಕಾರು ಹೊರಟು ಹೋಗಿ ೫–೧೦ ಮಿನಿಟುಗಳು ಕಳೆದರೂ ಅವಳಿಗೆ ಬಾಹ್ಯಸ್ಮೃತಿಯೇ ಇರಲಿಲ್ಲ. ನಡೆ ದದ್ದು ಏನು ಎನ್ನುವದು ಅವಳಿಗೆ ತಿಳಿಯದಂತಾಗಿತ್ತು. ಗಾಬರಿಯಿಂದ ಎದೆ ಧಡ ಧಡನೆಂದು ಹೊಡೆದುಕೊಳ್ಳುತ್ತಿತ್ತು. ಕೈಕಾಲುಗಳ ಮೇಲಿನ ಅವಳ ಹತೋಟಿಯು ತಪ್ಪಿ ಥರಥರನೆಂದು ಅವು ನಡುಗುತ್ತಿದ್ದವು. ಮೋರೆ ವಿವರ್ಣವಾಗಿ ಬೆವರನ್ನು ಸುರಿಸುತ್ತಿತ್ತು. ಸುತ್ತಲೂ ಒಮ್ಮೆ ದೃಷ್ಟಿಸಿದಳು. ಎಡಬಲಕ್ಕೆ ನಿರ್ಜನವಾದ ಭೂಮಿ ಅವಳನ್ನು ಅಣಗಿಸು ವಂತಿತ್ತು. ಕತ್ತಲೆ ತನ್ನ ಹಿಡಿತದಿಂದ ನಗರವನ್ನು ಬಿಗಿಯಲಾರಂಭಿ ಸಿತ್ತು. ಆ ರೌದ್ರ ಶಾಂತಿಯಲ್ಲಿ ಅವಳ 'ಧಡ್ ಧಡ್' ನೆಂದು ಹಾರುತ್ತ ಅವಳಿಗೆ ವಿಪರೀತ ಭಯವನ್ನುಂಟುಮಾಡುತ್ತಿತ್ತು. ಆ ಶ್ವೇತಬಣ್ಣದ ಕಾರು ತನ್ನ ಪ್ರೇತವನ್ನು ನೋಡಲು ಬಂದಿತೆಂದು ಕಾಣುತ್ತದೆ. ವೀಣ ಳಿಗೆ ಕಾರನ್ನು ಮುಂದೆ ನಡೆಯಿಸಲು ಸಾಧ್ಯವಾಗಲೊಲ್ಲದು. ಕಾಲು ಸೀಸದಂತೆ ಜಡವಾಗಿ ಅವಳ ಆಡಳಿತಕ್ಕೆ ನಕಾರವನ್ನು ಸೂಚಿಸುತ್ತಿದ್ದವು. ತನ್ನ ಕಾಲು ಹೌದೋ ಅಲ್ಲವೋ ಎಂಬ ಸಂಶಯಕೂಡ ಜನಿಸಿತವಳಿಗೆ ಹೆಚ್ಚು ಹೊತ್ತು ಅಲ್ಲಿ ನಿಲ್ಲುವಂತಿರಲಿಲ್ಲವಾದ್ದರಿಂದ ಪ್ರಯತ್ನಪೂರ್ವಕ ವಾಗಿ ಕಾರನ್ನು ಸ್ಟಾರ್ಟ ಮಾಡಿದಳು. ಸ್ಟಿಯರಿಂಗನ್ನು ಹಿಡಿದ ಅವಳ ಕೈಗಳು ಗಡಗಡನೆಂದು ಕಂಪಿಸುತ್ತಿದ್ದವು. ನಗರದ ದೀಪಗಳು ಕಾಣುವ

ವರೆಗೆ ಅಲ್ಲೋಲ ಕಲ್ಲೋಲವಾದ ಅವಳ ಮನಸ್ಸು ಸ್ಥಿಮಿತಕ್ಕೆ ಬರಲು ಸಾಧ್ಯವಿರಲಿಲ್ಲ. ನಿಶೆಯೊಡಗೂಡಿದ ತಂಗಾಳಿಯಿಂದ ವೀಣಳಿಗೆ ಚಳಿ ಯೆನಿಸುತ್ತಿತ್ತು.

ಲಕಿ ರೆಸ್ಟೋರೆಂಟಿನ ಬಳಿಗೆ ಕಾರನ್ನು ನಿಲ್ಲಿಸಿ ಒಳಗೆ ಪ್ರವೇಶ ಮಾಡಿದಳು. ವೀಣಾ ಜನದ ಗದ್ದಲದಿಂದ ಮರೆಯಾಗಿ ಸ್ಪೇಶಲ್ ರೂಮಿನಲ್ಲಿ ಕುಳಿತು ಕಾಫಿಗೆ ಆರ್ಡರು ಮಾಡಿದಳು. ಕಾಫಿಯ ಕಪ್ಪನ್ನು ಕೆಳಗಿಡುವಾಗ ಅದು ಬಸಿಯೊಡನೆ ತಾಕಲಾಡಿ ಕಟ್ ಕಟ್ ಎಂಬ ಶಬ್ದವನ್ನು ಮಾಡುತ್ತಿತ್ತು. ಸುತ್ತಲೂ ತನ್ನನ್ನು ಯಾರಾದರೂ ನೋಡಿದರೇನೋ ಎಂಬ ಭಾವನೆ ಇವಳಿಗೆ. ಆದರೆ ಜನ ತಮ್ಮ ಸಂಭಾಷಣೆಯಲ್ಲಿ ಮಗ್ನರಾಗಿದ್ದರು. ವೀಣಾ ಕಾಫಿ ಕುಡಿದು ಹೊರಬರುವಾಗ ಮೆಟ್ಟಲುಗಳನ್ನಿಳಿದು ಹಿಂದಿನಿಂದ ಪ್ರಸನ್ನಕುಮಾರರು ತಮ್ಮ ಗೆಳೆಯರೊಡನೆ ಹರಟೆ ಹೊಡೆಯುತ್ತ ಬರುತ್ತಿದ್ದರು. ವೀಣಾ ಅವರ ದೃಷ್ಟಿಯನ್ನು ಸೆಳೆವಳೆಂದು ಕಾಣುತ್ತದೆ. ''ವೀಣಾದೇವಿ" ಎಂದು ಯಾರೋ ಕರೆದದ್ದು ನೋಡಿ ಅವಳು ಹೊರಳಿದಳು. ಪ್ರಸನ್ನ ಕುಮಾರರು ಅವಳ ಹತ್ತಿರ ಬರುತ್ತಿದ್ದರು.

''ನಿಮ್ಮ ಜೊತೆಗಿದ್ದ ಶೇಖರ ಎಲ್ಲಿ ಹೋದ.?'' ಪ್ರಸನ್ನಕುಮಾರರು ವೀಣಳನ್ನು ಕೇಳಿದರು.

''ಶೇಖರ, ಅವನೆಲ್ಲಿ ನನ್ನ ಜೊತೆಗೆ ಬಂದಿದ್ದ?'' ವಿಸ್ಮಿತಳಾಗಿ ಅವರ ಮೋರೆ ನೋಡಿದಳು.

''ನಿಮ್ಮ ಜೊತೆಗೆ ಬಂದಿರಲಿಲ್ಲವೇ?''--ಅವಳಿಗಿಂತ ಇಮ್ಮಡಿಯಾದ ಅಬ್ಬರದಿಂದ ಕೇಳಿದರು.

"ನನ್ನ ಜೊತೆಗೆ ಯಾರೂ ಬಂದಿರಲಿಲ್ಲ. ನಾನು ಒಂಟಿಗೆಯಾಗಿಯೆ ಬಂದಿದ್ದೇನೆ."

''ಅರೆ ಶೇಖರ ಇದೆ ಈಗ ಇಲ್ಲಿಗೆ ಬಂದಿದ್ದ, ಹೊರಗೆಯೆ ಕಾರನ್ನು ನಿಲ್ಲಿಸಿದ್ದ. ಬಹುಶಃ ಅದರಲ್ಲಿ ನೀವಿರಬೇಕೆಂದುಕೊಂಡೆ.

''ಕಾರನ್ನು ತೆಗೆದುಕೊಂಡು ಬಂದಿದ್ದನೆ?" ಬಿಳಿಯದಾದ ಕಾರು ಎನ್ನುತ್ತಲೆ ವೀಣಳ ಮುಖ ಬೆಳ್ಳಗಾಯಿತು. ಅದನ್ನು ನೋಡಿ ಪ್ರಸನ್ನ ಕುಮಾರರು ಗಾಬರಿಯಿಂದ--

"ಯಾಕೆ ಮೈಯಲ್ಲಿ ಚೆನ್ನಾಗಿಲ್ಲವೇ?" ಎಂದರು. ಇಲ್ಲ ಚನ್ನಾಗಿದ್ದೇನೆ ಎನ್ನುತ್ತ ವೀಣಾ ತ್ವರಿತಗತಿಯಿಂದ ಹೊರಬಿದ್ದಳು. ನಿಜವಾಗಿ ಈಗವಳ ಸ್ಥಿತಿ ಯಾವವನ್ನೂ ನಂಬದಂತಾಗಿತ್ತು. ಶೇಖರನೆ ಹಾಗಾದರೆ ತನ್ನ ಪಾಲಿಗೆ ಯಮದೂತನಾಗಿ ಬಂದವನು! ಅವಳ ಹೃದಯ ಭೀತಿಯಿಂದ ಮತ್ತೊಮ್ಮೆ ಕಂಪಿಸಿತು. ವೀಣಳ ಗಂಟಲು ಬಿಗಿದು ಕಣ್ಣಿನಲ್ಲಿ ನೀರು ತುಂಬಿಕೊಂಡಿದ್ದವು. ಇಲ್ಲಿ ತನ್ನವರೆನ್ನುವರು ಯಾರೂ ಇಲ್ಲ. ತಾನು ಇಲ್ಲಿಗೆ ಬರದೆ ಇದ್ದರೆ ಒಳಿತಾಗುತ್ತಿತ್ತೆಂದು ಪಶ್ಚಾತ್ತಾಪದಿಂದ ಬೇಯುತ್ತಿದ್ದಳು. ಆದರೂ ಅವಳ ಮನಸ್ಸು ಶ್ರೀಧರನನ್ನು ಭೆಟ್ಟಿಯಾಗಲು ಬಯಸುತ್ತಿತ್ತು. ಈ ಸಂಗತಿಯನ್ನು ಇನ್ಸಪೆಕ್ಟರರೆದುರಿಗೆ ಹೇಳಿದರೆ ಉತ್ತಮವೆಂದವಳಿಗೆ ತೋರಿತು.

ಇನ್ಸಪೆಕ್ಟರ ಪೋಲೀಸ ಸ್ಟೇಶನ್ನನ್ನು ತಲುಪಿದಾಗ ಶೇಖರ ಬಹಳ ಹೊತ್ತಿನಿಂದ ಅವನ ದಾರಿಯನ್ನೇ ಕಾಯುತ್ತ ಕುಳಿತುಕೊಂಡಿದ್ದ. ಅವನನ್ನು ನೋಡಿ ಅಚ್ಚರಿಯಾದರೂ ಶ್ರೀಧರ ತೋರಿಸಿಕೊಡದೆ ಮುಗುಳ್ನಗೆಯನ್ನು ಮುಖದಲ್ಲಿ ತೋರಿಸಿದ.

"ಹಲೋ ಶೇಖರ್ ಮತ್ತೇನು?"

"ಸರ್ ನಿಮ್ಮ ಹತ್ತರ ಮಹತ್ವದ ಒಂದು ಸೂಚನೆಯನ್ನು ಮಾಡಬೇಕಾಗಿತ್ತು." ಶ್ರೀಧರನ ಮೋರೆಯ ಮೇಲೆ ಕುತೂಹಲದ ಮೋಡ ವೊಮ್ಮೆ ಬೆಳಗಿ ಮಾಯವಾಯಿತು. "ನೀವು ಅಗತ್ಯವಾಗಿ ಸೂಚನೆ ಮಾಡಬಹುದು."

"ನಿಮಗೆ ಮೊದಲು ತಿಳಿಸಬಾರದೆಂದು ಮಾಡಿದ್ದೆ ಆದರೆ ನಿರ್ವಾಹವಿಲ್ಲ ಸೀರಿಯಸ್ ಪ್ರಸಂಗವಾದುದರಿಂದ ತಿಳಿಸದೆ ನಿರ್ವಾಹವಿಲ್ಲ."—ಶ್ರೀಧರ ಮಾತನಾಡುತ್ತ ಜೇಬಿನಿಂದ ಒಂದು ಟೈಪ ಮಾಡಿದ ಕಾಗದವನ್ನು ಅವನ ಕೈಗೆ ಕೊಟ್ಟ. ಶ್ರೀಧರ ಅದನ್ನು ಬಿಚ್ಚಿ ಓದಲಾರಂಭಿಸಿದ.

"ಶೇಖರ ನೀನು ನನ್ನಿಂದ ಎಷ್ಟೆ ಮುಚ್ಚಿಕೊಂಡರೂ ಸಾಧ್ಯವಿಲ್ಲ. ನನ್ನ ಕೊಲೆಯ ಪ್ರಯತ್ನ ಮಾಡುವೆನೆಂಬುದು ನಿನ್ನ ಭ್ರಮೆ ಅಜ್ಜನ ಕೊಲೆಯಲ್ಲಿ ನಿನ್ನ ಹಸ್ತವಿರುವದನ್ನು ಬಲ್ಲೆ. ನನಗೆ ಆಸ್ತಿ ದೊರೆತುದಕ್ಕಾಗಿ ನಿನಗೆ ಬಹಳ ತ್ವೇಷವುಂಟಾಗಿದೆ. ಪೋಲೀಸರ ಕಣ್ಣಿನಿಂದ ಆ

ಸಾಮಾನನ್ನು ಬಹಳ ದಿನ ಮುಚ್ಚಿಡಲಾರೆ. ಒಂದಿಲ್ಲ ಒಂದು ದಿನವಾದರೂ ಅದು ಹೊರ ಬರಲೇಬೇಕು. ನೀನು ನನ್ನ ಕೊಲೆಯ ಪ್ರಯತ್ನ ಮಾಡಿದೆಯೆಂದು ಸುಳ್ಳೆ ಇನ್ಸಪೆಕ್ಟರರಿಗೆ ಹೇಳುವೆ.

ಇತಿ ವೀಣಾ.

ಶ್ರೀಧರ ಆ ಪತ್ರವನ್ನು ನೋಡಿ ಬೆಚ್ಚಿ ಬಿದ್ದ- ''ಮಿ ಶೇಖರ ಈ ಪತ್ರವನ್ನು ನಿಮಗೆ ಯಾರು ಕೊಟ್ಟರು ಸ್ವತ ಅವಳೇ ಕೊಟ್ಟಳೋ?''-- ಎಂದು ಆ ಪತ್ರವನ್ನು ಶೇಖರನಿಗೆ ತೋರಿಸುತ್ತ ಕೇಳಿದ.

''ಇಲ್ಲ ಇಂದು ಬೆಳಿಗ್ಗೆ ಅದು ಪೋಸ್ಟಿನಿಂದ ನನಗೆ ಬಂದಿತು. ನೋಡಿ ಇನ್ಸಪೆಕ್ಟರ ವೀಣಾ ಈ ರೀತಿಯಾಗಿ ನನ್ನ ಮೇಲೆ ಸುಳ್ಳು ಆಪಾದನೆಯನ್ನು ಮಾಡುತ್ತಿದ್ದಾಳೆ. ಯಾಕೆಂದು ನನಗೆ ತಿಳಿಯಲೊಲ್ಲದು. ''ಶೇಖರ ನೀವು ವೀಣಳೊಡನೆ ಪ್ರತ್ಯಕ್ಷವಾಗಿ ಜಗಳವಾಡಿದ್ದಿರಾ? ಅಥವಾ ಅವಳೆ ನಿಮ್ಮೊಡನೆ ಕಾಲು ಕೆದರಿ ಜಗಳವಾಡುವಳೇ?"

''ನೋಡಿ ಮೊದಲು ಅವಳೊಡನೆ ತಂಟೆ ಮಾಡಲು ಪ್ರಾರಂಭಿಸಿದವನು ನಾನೆ. ಅಂದಿನ ದಿನ ನಾನೆ ಅವಳಿಗೆ ಬಾಯಿಗೆ ಬಂದಂತೆ ಅಂದೆ. ಆದರೆ ಅಂದು ಅವಳು ಒಂದು ಬಿರುಸು ಮಾತನ್ನೂ ನನಗೆ ಅನ್ನಲಿಲ್ಲ. ಆದರೆ ಈ ಪತ್ರವನ್ನು ಬರೆದಿದ್ದಾಳೆ. ಈ ರೀತಿಯಾದರೆ ಯಾರಿಗಾದರೂ ಸಂದೇಹ ಬರುವದು ನಿಶ್ಚಿತವಲ್ಲವೆ ಇನ್ಸಪೆಕ್ಟರ?."

--ಶೇಖರ ಮಾತಿನಲ್ಲಿ ಅಸಹಾಯತೆಯನ್ನು ದೀನತೆಯಿಂದ ತೋರಿಕೊಂಡ.

''ನೀವು ಹೇಳುವದು ನಿಜ ಶೇಖರ. ವೀಣಾ ಈ ರೀತಿಯಾಗಿ ಪತ್ರ ಬರೆಯುವಳೆಂದು ನಾನು ತಿಳಿದಿರಲಿಲ್ಲ. ನೀವು ಮುಂಜಾಗ್ರತೆಯಿಂದ ಅದನ್ನು ತೋರಿಸಿದ್ದು ಬಹಳ ಒಳ್ಳೆಯದಾಯಿತು.''

''ಇನ್ಸಪೆಕ್ಟರ ನೀವೆ ಅವಳಿಗೆ ಬುದ್ಧಿವಾದವನ್ನು ಹೇಳಿ. ಇಂದು ಪತ್ರ ಬರೆದವಳು ನಾಳೆ ನಾಲ್ಕು ಜನರಲ್ಲಿ ಸಿಟ್ಟಿನಿಂದ ಅಂದರೆ ವಿಪರೀತ ಪರಿಣಾಮವಾಗುತ್ತದೆ."

''ಶೇಖರ ನೀವೇನು ಮಾಡಲು ಹೋಗಬೇಡಿ. ವೀಣಳ ಈ ವಿಚಿತ್ರ ವರ್ತನೆಯನ್ನು ವಿಚಾರಿಸುವೆ,''--- ಶ್ರೀಧರ ಶೇಖರನಿಗೆ ಆಶ್ವಾಸನವಿತ್ತು ಕಳುಹಿದ.

ಶ್ರೀಧರ ಮನೆಗೆ ಬಂದಾಗ ಅವನಿಗಾಗಿ ಫೋನು ಕಾದಿತ್ತು. ಮನೆಯ ಆಳು ನಿಮಗಾಗಿ ೫-೬ ಸಲ ಯಾರೋ ವೀಣಾದೇವಿ ಎನ್ನುವವರು ಫೋನು ಮಾಡಿದರು ಎಂದು ತಿಳಿಸಿದ. ಶ್ರೀಧರ ಅಲ್ಲಿಗೆ ಬಂದು ಐದು ನಿಮಿಷಗಳು ಕಳೆದ ಮೇಲೆ ಫೋನಿನ ಗಂಟೆ ಮತ್ತೆ ಬಾರಿಸಿತು.

''ಹಲೋ ಯಾರದು?'' ಶ್ರೀಧರ ಕೇಳಿದ. ''ನಾನು ವೀಣಾದೇವಿ ಇನ್ಸಪೆಕ್ಟರರು ಮನೆಗೆ ಬಂದಿದ್ದಾರೆಯೆ?''

"ನಾನೆ ಮಾತನಾಡುತ್ತಿರುವವನು ಏನಾದರೂ ಅರ್ಜಂಟ ಕೆಲಸ ವಿತ್ತೆ?"

''ಹೌದು ಈಗಾಗಲೆ ನಿಮಗೆ ೫-೬ ಸಲ ಫೋನು ಮಾಡಿದ್ದೆ. ನೀವು ಮನೆಯಲ್ಲಿರಲಿಲ್ಲ. ನಿಮ್ಮೊಡನೆ ನಾನು ಬಹಳ ಮಾತನಾಡಬೇಕಾಗಿದೆ. ಅಲ್ಲಿಗೆ ಬರಬಹುದೆ ನಾನು?''

"ಅವಶ್ಯವಾಗಿ ಬನ್ನಿ ನಾನಿಲ್ಲಿಯೇ ಇರುತ್ತೇನೆ." ಎಂದು ಶ್ರೀಧರ ಫೋನ ಡಿಸ್-ಕನೆಕ್ಟ ಮಾಡಿದ. ವೀಣಾ ಯಾಕೆ ಬರುವಳೆಂದು ಶ್ರೀಧರ ನಿಗೆ ತಿಳಿಯಲಿಲ್ಲ ಈ ಹೆಂಗಸು ಬಹಳ ವಿಚಿತ್ರವಾಗಿ ವರ್ತಿಸುತ್ತಿದ್ದಾಳೆ. ಶೇಖರನು ಕೊಲೆ ಮಾಡಿದ್ದನ್ನು ಸ್ವತಃ ನೋಡಿದಂತೆ ಮಾಡುತ್ತಿದ್ದಾಳೆ. ಹತ್ತು ನಿಮಿಷದಲ್ಲಿ ವೀಣಾ ಕಾಲಿಟ್ಟಾಗ ಅವಳ ರೂಪು ಅಸ್ತವ್ಯಸ್ತವಾಗಿ ಮೋರೆ ವಿವರ್ಣವಾಗಿತ್ತು.

''ಇಂದು ನೋಡಿ ನನ್ನ ಜೀವನದಲ್ಲಿ ಅತ್ಯಂತ ಮಹತ್ವಪೂರಿತವಾದ ಘಟನೆ ಜರುಗಿತು. ವೀಣಾ ವಿಶದವಾಗಿ ಅವನಿಗೆಲ್ಲವನ್ನು ತಿಳಿಸಿದಳು. "ಇನಸ್ಪೆಕ್ಟರ ಇಲ್ಲಿ ನನ್ನವರೆನ್ನುವವರ್‍ಯಾರು ಇಲ್ಲ. ಶೇಖರ ಎಂದು ಏನು ಮಾಡುವ ನೆಂದು ಹೇಳಲು ಬರುವಂತಿಲ್ಲ."-ವೀಣಳ ಮಾತಿನಲ್ಲಿ ದುಃಖ ತುಂಬಿತ್ತು.

''ವೀಣಾದೇವಿ ನೀವು ಹೇಳಿದ್ದು ನಾನು ನಿಜವೆಂದು ನಂಬಲೇ?"

—ಶ್ರೀಧರನು ಕೇಳಿದ ಪ್ರಶ್ನೆ ವೀಣಳನ್ನು ಕ್ರೂರಂಬಿನಂತಿರಿಯಿತು. ಅವಳಿಗೆ ದುಃಖವನ್ನು ತಡೆಯುವದಾಗಲಿಲ್ಲ. ಕಣ್ಣಿನಿಂದ ನೀರು ಉದು ರಲು ಆರಂಭಿಸಿತು. ಶ್ರೀಧರ ಈಗ ತಬ್ಬಿಬ್ಬಾದ ಅವಳನ್ನು ಯಾವ ರೀತಿ ಯಾಗಿ ಸಮಾಧಾನಪಡಿಸಬೇಕೆಂಬುದು ತಿಳಿಯದಾಯಿತು. ಆದರೂ ಪ್ರಯತ್ನಪೂರ್ವಕವಾಗಿ— ''ನೀವೇನು ತಿಳಿದುಕೊಳ್ಳಬೇಡಿ. ಇಂಥ ವಿಷಮ ಪರಿಸ್ಥಿತಿಯಲ್ಲಿ ನಾವು ಯಾರನ್ನು ನಂಬುವಂತಿರುವದಿಲ್ಲ. ನಮ್ಮ

ವ್ಯವಹಾರವೆ ಒರಟು ರೀತಿಯದು. ನಾನು ಕಠಿಣ ರೀತಿಯಿಂದ ವರ್ತಿಸಿದ್ದರೆ ಅದರಿಂದ ನೀವು ಭಯಪಡುವ ಕಾರಣವಿಲ್ಲ."

ನೀರು ತುಂಬಿದ ನಯನಗಳಿಂದೊಮ್ಮೆ ಅವನನ್ನು ನೋಡಿದಳು. ತಾನು ತಿಳಿದಷ್ಟು ಕಲ್ಲುಹೃದಯ ಅವನದಲ್ಲವೆಂದು ಅವಳು ತಿಳಿದಳೆಂದು ಕಾಣುತ್ತದೆ.

"ಇನಸ್ಪೆಕ್ಟರ ನಾನು ಸತ್ಯವನ್ನೆ ಹೇಳುತ್ತಿದ್ದೇನೆ. ಇದು ಆಕಸ್ಮಿಕವಲ್ಲ. ನಿಜವಾಗಿ ನಡೆದ ಘಟನೆ ನೀವ್ಯಾಕೆ ಇದನ್ನು ಸಂದೇಹಿಸುತ್ತಿರೆಂಬುದು ತಿಳಿಯದಾಗಿದೆ.

—ದೀನತೆ, ಅಸಹಾಯತೆಗಳು ಮೈವೆತ್ತು ಮೊರೆಯಿಡುವಂತೆ ಅವಳು ಮಾತನಾಡಿದ ರೀತಿಯಿತ್ತು.

"ನೀವು ಯಾಕೆ ಶೇಖರನೊಡನೆ ದ್ವೇಷ ಸಾಧಿಸುತ್ತೀರಿ?"

"ನಾನೆಲ್ಲಿ ಅವನ ವೈರ ಕಟ್ಟಿಕೊಟ್ಟಲು ಹೋಗಿದ್ದೇನೆ. ಅವನೊಡನೆ ಮಾತನಾಡುವವದನ್ನು ಸಹ ಈಗ ಬಿಟ್ಟು ಬಿಟ್ಟಿದ್ದೇನೆ."

"ನಿಮಗೆ ಟೈಪಿಂಗ ಬರುತ್ತದೆಯೇ ವೀಣಾ."

"ಟೈಪಿಂಗ........ ಅದೇಕೆ ಅಷ್ಟು ಚನ್ನಾಗಿ ಬರುವದಿಲ್ಲ. ಆದರೂ ಆಗೀಗ ಟೈಪು ಮಾಡುತ್ತೇನೆ. ಯಾಕೆ?" —ವಿಷಯ ಬದಲಾದುದನ್ನು ಕೇಳಿ ಅವಳು ನುಡಿದಳು.

"ನಿಮ್ಮ ರೂಮಿನಲ್ಲಿ ಟೈಪರೈಟರ ಇದೆಯೇ?" "ಇದೆ. ಇದರ ಕಾರಣ ನನಗೆ ತಿಳಿಯಲಿಲ್ಲ."

"ಇಲ್ಲಿ ನೋಡಿ ನೀವು ಶೇಖರನಿಗೆ ಬರೆದ ಪತ್ರವಿದೆ."

ವೀಣಾ ಅದನ್ನು ಓದಿದಳು. ಓದುತ್ತಿದ್ದಂತೆ ಅವಳ ಮುಖ ಬೆಳ್ಳಗಾಯಿತು. ಚಿಲಿಪಿಲಿ ಗುಟ್ಟುವ ಹರುಷದಿಂದಿರುವ ಹಾರಲುಬಾರದ ಎಳೆಯ ಹಕ್ಕಿಯ ಎದುರಿಗೆ ಹೆಡೆ ತೆರೆದ ನಾಗರಹಾವು ನಿಂತಂತಾಗಿತ್ತು. ವೀಣಳ ಸ್ಥಿತಿ.

"ಹೇಳಿ ಇದನ್ನು ಟೈಪು ಮಾಡಿ ಶೇಖರನಿಗೆ ಕಳುಹಿಸಿದವರು ನೀವಲ್ಲವೇ?"

ವೀಣಾ ಮೌನವಾಗಿದ್ದಳು. ಆ ಮೌನ ಶ್ರೀಧರನ ಹೃದಯವನ್ನು ಕ್ರೂರಲಗಿನಂತಿರಿಯುತ್ತಿತ್ತು.

ಹೇಳಿ ವೀಣಾದೇವಿ ನೀವಲ್ಲವೆ ಅದನ್ನು ಬರೆದವರು."

ಅವಳು ತನ್ನ ಮೋರೆಯನ್ನು ಕೈಯಿಂದ ಮುಚ್ಚಿಕೊಂಡಳು. ಬೆರಳುಗಳ ಸಂದಿನಿಂದ ಅಶ್ರು ತೊಟ್ಟಿಕ್ಕುತ್ತಿತ್ತು. ಶ್ರೀಧರನ ಹೃದಯವು ಸಹ ಆ ಆರ್ತತೆಯಿಂದ ಕರಗಿತು. ಅವನಲ್ಲಿಯ ಮನುಷ್ಯತ್ವ ಅವನನ್ನು ಮೃದು ಮಾಡುತ್ತಿದ್ದರೆ ಕರ್ತವ್ಯ ಕಠೋರನನ್ನಾಗಿ ಮಾಡುತ್ತಿತ್ತು. ಈ ಎರಡು ಪ್ರಬಲ ಶಕ್ತಿಗಳ ತಾಕಲಾಟವಲ್ಲಿ ಅವನ ಮತಿ ಮಸಣಿಸಿತ್ತು. ದಿಙ್ಮೂಢನಾಗಿ ಕುಳಿತುಕೊಂಡಿದ್ದ. ವೀಣಾ ಬಿಕ್ಕುತ್ತ ಹೇಳಿದಳು-"ಇನ್ಸಪೆಕ್ಟರ ಈ ಪತ್ರದ ವಿಷಯವಾಗಿ ನನಗೇನೂ ತಿಳಿಯದು. ಆ ರೀತಿಯಾಗಿ ಪತ್ರವನ್ನು ನಾನು ಬರೆದಿಯಿಲ್ಲ. ಇದೆಲ್ಲ ಅವನ ಕುಟಿಲ ಕಾರಸ್ಥಾನ. ನನ್ನ ಮಾತನ್ನು ನಂಬಿ."

"ನಿಮ್ಮ ಮನೆಗೆ ಬಂದು ಆ ಟೈಪರೈಟರನ್ನು ನೋಡಲಿ?"

"ಅವಶ್ಯವಾಗಿ ಬನ್ನಿ ಈ ಪತ್ರವನ್ನು ನಾನು ಟೈಪು ಹೊಡೆದೆಯಿಲ್ಲ."

ಶ್ರೀಧರ ಅವಳನ್ನು ಕರೆದುಕೊಂಡು ಮನೆಗೆ ಹೊರಟ. ಶ್ರೀಧರ ಈಗ ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿದ್ದ. ಶೇಖರನೆ ಇದನ್ನು ಬೇಕೆಂದು ಮಾಡಿದ್ದಾನೆಯೋ? ಅಥವಾ ಇವಳೆ ನಟನೆ ಮಾಡುತ್ತಿದ್ದಾಳೆಯೆ? ವೀಣಳದು ನಟನೆಯಲ್ಲವೆಂದು ಅವನಿಗನಿಸುತ್ತಿತ್ತು. ಆದರೂ ಅಪನಂಬಿಕೆ. ಅವನ ಮನದಲ್ಲಿ ಅನುಮಾನ ಬೃಹದಾಕಾರ ತಾಳಿ ನಿರ್ಧಾರದ ದಾರಿಯಿಂದ ಅವನನ್ನು ಬಿರುಗಾಳಿಯ ಅಬ್ಬರಕ್ಕೆ ಬಲಿಯಾದ ಜೊಂಡಿನಂತೆ, ಪ್ರಚಂಡ ತರಂಗಗಳ ಮಧ್ಯದಲ್ಲಿದ್ದ ಹುಲುನಾವೆಯಂತೆ ತೇಲಿಸಿಕೊಂಡು ಒಯ್ಯುತ್ತಿತ್ತು. ವೀಣಾ ಅವನನ್ನು ಕರೆದುಕೊಂಡು ರೂಮಿಗೆ ತೆರಳಿದಳು. ಅಲ್ಲೊಂದು ಟೇಬಲ್ಲಿನಮೇಲೆ ಚಿಕ್ಕದಾದ ಟೈಪರೈಟರೊಂದಿತ್ತು. ಶ್ರೀಧರ ಅದನ್ನು ಪರೀಕ್ಷಿಸಿದ. ಅದೆ ಟೈಪರೈಟರದಿಂದ ಈ ಪತ್ರವನ್ನು ಟೈಪು ಮಾಡಲಾಗಿತ್ತು. ವೀಣಳಿಗೂ ಅದು ತಿಳಿದು ಅವಳು ಮತ್ತಷ್ಟು ಭಯಭೀತಳಾದಳು.

"ವೀಣಾದೇವಿ, ನೀವು ಹೊರಗೆ ಹೋಗುವಾಗ ಬಾಗಿಲಿಗೆ ಬೀಗ ಹಾಕುತ್ತೀರಾ? ಅಥವಾ ಹಾಗೆಯೇ ಬಿಟ್ಟು ತೆರಳುತ್ತೀರಾ?"—ಶ್ರೀಧರ ಟೈಪರೈಟರಿನ ಮೇಲೆ ಬೆರಳಾಡಿಸುತ್ತ ಕೇಳಿದ.

"ನಾನು ಎಂದು ಬಾಗಿಲವನ್ನು ಹಾಗೆಯೇ ಬಿಟ್ಟು ತೆರಳುವದಿಲ್ಲ. ತಪ್ಪದೆ ಬೀಗ ಹಾಕುವೆ ಎಂದಾದರೊಂದುದಿನ ಮರೆತು ಹಾಗೆಯೇ ತೆರಳಿರ ಬಹುದು. ಹಾಗೆಂದು ನಿಶ್ಚಿತವಾಗಿ ಹೇಳಲಾರೆ"

"ನಿಮಗೆ ಮನೆಯಲ್ಲಿ ಯಾರಮೇಲಾದರೂ ಸಂಶಯವಿದೆಯೇ?"

"ಇಲ್ಲ ಬಿಡಿ. ಶೇಖರನ ಹೊರತಾಗಿ ನನ್ನೊಡನೆ ಎಲ್ಲರೂ ಸರಿ ಯಾಗಿಯೆ ವರ್ತಿಸುತ್ತಾರೆ."

"ಹಾಗೋ ಸರಿ"-ಅವನಿಗೆ ಯಾವ ವಿಷಯವು ತಿಳಿಯದಾಯಿತು.

"ಇರಲಿ ನಾಳೆ ಬಂದು ಭೆಟ್ಟಿಯಾಗುವೆ" ಎಂದು ಶ್ರೀಧರ ಬಾಗಿ ಲೆಡೆಗೆ ತೆರಳಿದ.

"ಇನ್ಸಪೆಕ್ಟರ ನನ್ನಮೇಲೇನಾದರೂ ಸಂಶಯವುಳಿದಿದೆಯೇ"— ವೀಣಾ ಕಳಕಳಿಯಿಂದ ಕೇಳಿದಳು.

"ನೀವು ಗಾಬರಿಯಾಗುವ ಕಾರಣವಿಲ್ಲ." ಎಂದಿಷ್ಟೇ ಹೇಳಿ ಬಾಗಿಲು ತರೆದು ಹೊರಬಂದ. ಎದುರಿನಿಂದ ಅಡುಗೆಯವಳಾದ ನರಸಮ್ಮ ಬರುತ್ತಿದ್ದಳು.

"ಅಮ್ಮಾವರೆ, ಅಡಿಗೆಯಾಗಿದೆ. ಊಟಕ್ಕೇಳಿ" ಎಂದು ಹೇಳಿ ಒಳಗೆ ತೆರಳಿದಳು.

"ಈಗ ಇವರನ್ನು ಕಳಿಸಿಬರುವೆ ನರಸಮ್ಮ" ಎನ್ನುತ್ತ ವೀಣಾ ಇನ್ಸಪೆಕ್ಟರರನ್ನು ಕಳಿಸಲು ಹೊರಟಳು. ಶ್ರೀಧರನಿಗೆ ಈಗ ಒಂದು ಹೊಸ ವಿಷಯ ತಲೆಯಲಿ ಬಂದಿತ್ತು.

ಇನ್ಸಪೆಕ್ಟರರು ಜೋಸೆಫರಿಗೆ ಹೇಳಿದ್ದ ಕಾರ್ಯ ಯಶಸ್ವಿಯಾಗಿತ್ತು. ಅಂದು ಜೋಸೆಫರು ರಹೀಮುನ ಕೋಣೆಗೆ ತೆರಳಿದ್ದರು. ರಹೀಮು ಆ ವೇಳೆಯಲ್ಲಿರಲಿಲ್ಲ. ಅವನ ಕೋಣೆಯನ್ನು ಚೆನ್ನಾಗಿ ಪರೀಕ್ಷಿಸಿದ ಮೇಲೆ ನಾರಾಯಣನ ಕೆಂಪುಕೋಟು ಅಲ್ಲಿ ದೊರೆಯಿತು. ರಹೀಮುನನ್ನು ಹಿಡಿದು ಕೊಂಡು ಬಂದು ಬಾಯಿಬಿಡಿಸಿದ ಮೇಲೆಯೇ ಅವನು ನಾರಾಯಣ ಆ ಕೋಟನ್ನು ಸುಟ್ಟುಹಾಕಲು ಕೊಟ್ಟಿದ್ದನೆಂದು ಹೇಳಿದ. ಅದನ್ನು ಕೇಳಿ ಜೋಸೆಫರ ಮುಖ ಹೆಮ್ಮೆಯಿಂದ ಹಿರಿದಾಯಿತು. ನಾರಾಯಣನ ಮೇಲೆಯೆ ಅವರ ಅನುಮಾನ ಬಲವಾಗಿತ್ತು. ತಮ್ಮ ಅನುಭವವು ದಾರಿ ತಪ್ಪುವದಿಲ್ಲವೆಂದು ಅವರಿಗೆ ಭರವಸೆಯಿತ್ತು. ಅವನ ರೂಮಿನಲ್ಲಿಯೇ ಆಯುಧವಿರುವದೆಂದು ಅವರ ನಂಬಿಕೆ. ಅದನ್ನು ಹುಡುಕಿಕೊಂಡು ಬರಲು ಅವಕಾಶ ಕಾಯುತ್ತಿದ್ದರು. ಆ ಸಂದರ್ಭವು ಬೇಗನೆ ಬಂದಿತು.

ರಾಜಾರಾಮುನ ಕುತೂಹಲವನ್ನು ಸುಬ್ರಹ್ಮಣ್ಯ ದಿನೆ ದಿನೆ ಕೆರಳಿಸು ತ್ತಿದ್ದ. ಅವನ್ಯಾರೆಂಬುದು ತಿಳಿಯುವದಕ್ಕಿಂತಲೂ ಅವನು ಖರ್ಚು ಮಾಡುವ ಹಣದಮೇಲೆ ಆಶೆ ಅವನಿಗೆ. ರಾಜಾರಾಮುನ ಜೀವನ ಮೊದ ಲಿನಿಂದಲೂ ಬಡತನದಲ್ಲಿಯೇ ಕಳೆದಿತ್ತು. ಆದ್ದರಿಂದಲೇ ಅವನು ಹೆಚ್ಚಾಗಿ ಹಣವಂತರ ಸ್ನೇಹವನ್ನು ಬಯಸಿ ಓಡಾಡುತ್ತಿದ್ದ. ನೂರಾರು ಕೆಲಸ ಗಳನ್ನು ಮಾಡಿದ್ದ. ಒಂದು ಗತಪ್ರಾಣವಾದ ಪತ್ರಿಕೆಯ ಉಪಸಂಪಾದಕ ನಾಗಿ ಕೆಲಸ ಮಾಡುತ್ತಿದ್ದ. ಬರುವ ೪೦–೫೦ ಸಂಬಳದಲ್ಲಿ ಹೇಗೋ ತನ್ನ ಒಂಟಿ ಜೀವನವನ್ನು ಸಾಗಿಸುತ್ತಿದ್ದ. ಅವನಿಂದು ಬದುಕಿದ್ದು ನಾಲಿ ಗೆಯ ಬಲದಿಂದ. ಅವನ ದುರ್ದೈವಕ್ಕೆ ಯಾರು ಅವನೊಂದಿಗೆ ಹೆಚ್ಚಿಗೆ ಸಖ್ಯವನ್ನು ಬೆಳೆಸಿರಲಿಲ್ಲ. ಅಲ್ಪಕ್ಕೆ ನಿರಾಶೆಯನ್ನು ಪಡುವ ಸ್ವಭಾವ ಅವನದಲ್ಲದ್ದರಿಂದಲೇ ಸಿಂದಬಾದದ ಸೇಲರನ ಹೆಗಲಮೇಲೆ ಏರಿ ಕುಳಿತ ಮುದುಕನಂತೆ ಸುಬ್ರಹ್ಮಣ್ಯನ ಪರಿಚಯಕ್ಕಾಗಿ ಗಂಟುಬಿದ್ದಿದ್ದ. ಸುಬ್ರ ಹ್ಮಣ್ಯನಿಗೆ ಇವನ ಲಾಂಗೂಲ ಚಾಲನವೃತ್ತಿ ತಿಳಿದಿತ್ತೆಂದು ಕಾಣುತ್ತದೆ.

ಇವನ ಕಣ್ಣು ತಪ್ಪಿಸಿ ಅವನು ಅಲೆದಾಡುತ್ತಿದ್ದ. ಆದರೆ ಒಂದು ದಿನ ರಾಜಾರಾಮನ ಜಾಲದಲ್ಲಿ ಬೀಳಬೇಕಾಯಿತವನು.

ಒಂದುದಿನ ರಾಜಾರಾಮು ತನ್ನ ಪ್ರೀತಿಯ ಮಾಮೂಲು ಹೊಟಲಿನಲ್ಲಿ ಕುಳಿತ್ತಿದ್ದ. ಅಲ್ಲಿ ಸುಬ್ರಹ್ಮಣ್ಯನನ್ನು ಕಂಡ. ಹಕ್ಕಿಗಾಗಿ ಕಾಯುವ ಗಿಡುಗದಂತೆ, ಬೇಟೆಗಾಗಿ ನೆಟ್ಟ ದೃಷ್ಟಿಯಿಂದ ನಿರೀಕ್ಷಿಸುತ್ತಿದ್ದ ಬೇಟೆಗಾರನಂತೆ ರಾಜಾರಾಮನ ಸ್ಥಿತಿಯಾಗಿತ್ತು. ಸುಬ್ರಹ್ಮಣ್ಯ ಇವನನ್ನು ಕಂಡು ಉರುಳಿಗೆ ಬಿದ್ದ ಪ್ರಾಣಿಯಂತೆ ಚಡಪಡಿಸುತ್ತಿದ್ದ. ಅದನ್ನು ರಾಜಾರಾಮು ನೋಡಿದ. ಅವನದು ಸೂಕ್ಷ್ಮ ನೋಟ. ಅವನ ದೀರ್ಘ ಜೀವನದಲ್ಲಿ ಎಷ್ಟೋ ಜನ ಸುಳಿದು ಹೋಗಿದ್ದಾರೆ. ಅವರೆಲ್ಲರ ಲಕ್ಷಣವನ್ನು ಇವನು ಪರಿಚಯದಲ್ಲಿಯೇ ಕಂಡುಕೊಳ್ಳುತ್ತಲಿದ್ದ. ಈ ಸುಬ್ರಹ್ಮಣ್ಯನ ಅಂತರಂಗದಲ್ಲಿಯ ಹೊಯ್ದಾಟ, ಸಿಟ್ಟುಗಳನ್ನು ತನ್ನ ಹದ್ದಿನ ಕಣ್ಣುಗಳಿಂದ ನೋಡಿ ಅರಿತುಕೊಂಡ. ಈ ಅಂಗಡಿಯಲ್ಲಿ ಮಾಲಿಕನಿಂದ ಹಿಡಿದು ಮಾಣಿಯವರೆಗೆ ಎಲ್ಲರ ಪರಿಚಯ ಚೆನ್ನಾಗಿದೆಯವನಿಗೆ. ಪ್ರತಿ ದಿನ ಮಾಲಿಕ ಇವನ ಪತ್ರಿಕೆಯನ್ನು ಪುಕ್ಕಟೆಯಾಗಿ ಓದಿಯೇ ಸುದ್ದಿಯನ್ನು ಸಂಗ್ರಹಿಸುತ್ತಿದ್ದ. ವಾಡಿಕೆಯಾಗಿ ಅವನು—

"ಲೋ ರಾಜಾರಾಮು ನಿನ್ನ ಪತ್ರಿಕೆಯನ್ನು ಇಲ್ಲಿ ತಾ ನೋಡುವ." ಎಂದು ದೊರಕಿಸಿದ. ಅವನ ಪತ್ರಿಕೆ ಮಿಸ ಪ್ರಿಂಟಿನ, ರೋಮಾಂಚನೀಯ ಸಂಗತಿಗಳ ತವರುಮನೆ. ಖೂನಿ, ದರೊಡೆ, ಅಪಘಾತ ಇವೇ ಮೊದಲಾದ ಭಯಂಕರ ಸುದ್ದಿಗಳಿಂದ ಅದು ತುಂಬಿರುತ್ತಿತ್ತು. ರಾಜಕಾರಣದ ಆವೇಶದ ಹೋರಾಟವಾಗಲಿ, ವ್ಯಾಪಾರದ ಏರಿಳಿತವಾಗಲಿ, ಸಾಹಿತ್ಯದ ಸುದ್ದಿಗಳಾಗಲಿ ಅದರಲ್ಲಿ ಪ್ರಕಟವಾಗುತ್ತಿದ್ದುದು ಅತಿ ವಿರಳ. "ಏನಯ್ಯಾ ಫ್ರಂಟ ಪೇಜಿನಲ್ಲಿಯ ನಾಲ್ಕೈದು ಅಕ್ಷರಗಳೇ ಮಾಯವಾಗಿವೆಯಲ್ಲ."

—ಹೋಟೆಲಿನ ಯಜಮಾನ ಪತ್ರಿಕೆಯನ್ನು ಒಂದೆರಡುಸಲ ತಿರುವಿ ಕೇಳಿದ.

"ಫ್ರಂಟಪೇಜೇ, ಇಂದು ಆ ಅಕ್ಷರಗಳ ಮೊಳೆಗಳು ದೊರೆಯಲಿಲ್ಲವಂತೆ ಆದರೆ ಪತ್ರಿಕೆಯು ನಿಲ್ಲಬಾರದೆಂಬ ಸದುದ್ದೇಶದಿಂದ ನಮ್ಮ ಸಂಪಾದಕರು ಅದು ಇಂದು ಬರುವಂತೆ ಮಾಡಿದ್ದಾರೆ."

''ಘನವಾದ ಪತ್ರಿಕೆ ನಿಮ್ಮದು. ಸಂಪ್ರದಾಯ ಕಾಯ್ದುಕೊಂಡು ಹೋಗಲು.''

''ಘನವಾದದ್ದಲ್ಲದೆ ಮತ್ತೇನು! ನಿಮ್ಮಂಥ ಪುಕ್ಕಟೆಯ ಸಹಸ್ರಾರು ವಾಚಕರೆದ್ದಾರೆ.ಅದಕ್ಕೆ ಅವಕ್ಕಾಗಿಯಾದರೂ ಅದು ಹೊರ ಬರಲೇಬೇಕು.''

—ರಾಜಾರಾಮ ಟೀಕೆಯ ಬಾಣವೊಂದನ್ನು ಯಜಮಾನನಮೇಲೆ ಸೆದ. ಹೊಟೆಲ ಮಾಲಿಕ ಅವನನ್ನು ಕೆಂಗಣ್ಣಿನಿಂದ ನೋಡಿ ತನ್ನ ಸ್ಥಳಕ್ಕೆ ಹೊರಟುಹೋದ

''ಹಲೋ ಸುಬ್ರಹ್ಮಣ್ಯ ಇತ್ತಿತ್ತಲಾಗಿ ಆಟವಾಡಲು ನೀವು ಅತ್ತ ಬರುತ್ತಲೇ ಇಲ್ಲವಲ್ಲ.''–ರಾಜಾರಾಮ ನಗುತ್ತ ಕೇಳದ.

ಸುಬ್ರಹ್ಮಣ್ಯ-ತನ್ನ ಮನಸ್ಸಿನಲ್ಲಿ ಅದು ನಿನಗಾಗಿಯೇ ಎಂದು ಶಪಿಸಿದ. ಆದರೂ ತೋರಿಕೆಗಾಗಿ ಹಾಗೇನಿಲ್ಲ. ಈಗ ಕೆಲಸ ಸ್ವಲ್ಪ ಹೆಚ್ಚಾದ್ದರಿಂದ ಆ ಕಡೆಗೆ ಬರುವದು ನಿಂತು ಹೋಗಿದೆ.''–ಎನ್ನುತ್ತ ಒಂದು ದೇಶಾವರಿ ನಗೆಯನ್ನು ಬೀರಿದ. ಸುಬ್ರಹ್ಮಣ್ಯ ಈ ಪೀಡೆಯನ್ನು ಬೇಗ ಬಗೆಹರಿಸಲು ಎರಡು ದೋಸೆಗೆ ಆರ್ಡರು ಮಾಡಿದ. ರಾಜಾರಾಮ ಈಗ ದೋಸೆಯ ಸಂಹಾರದಲ್ಲಿ ಮೂಕನಾಗಿದ್ದ.

''ಏನು ರಾಜಾರಾಮ ನಿನ್ನ ಕ್ಲಾಸಮೇಟ ಇನ್ಸಪೆಕ್ಟರರ ಕೊಲೆಯಾಗಿದೆಯೆ?'' ಎಂದು ಹೊಟೆಲ ಯಜಮಾನ ಇವರ ಬಳಿಗೆ ಆತುರದಿಂದ ಪೇಪರ ಹಿಡಿದುಕೊಂಡು ಬಂದ. ಆದರೆ ರಾಜಾರಾಮ ಏನೂ ಆಗದವನಂತೆ ಕುಳಿತಿದ್ದ. ಸುತ್ತಲಿದ್ದ ಜನರೆಲ್ಲ ಈ ಸಂಗತಿಯನ್ನು ಕೇಳಿ ಉತ್ಸುಕತೆಯಿಂದ ಇವನ ಬಾಯಿಯಿಂದ ಮಾತು ಹೊರಬರುವದನ್ನೇ ಕಾಯ್ದಿದ್ದರು.

''ನಿಮಗೆಲ್ಲೋ ಹುಚ್ಚು''ಎಂದು ಅವರ ಮುಖ ನೋಡಿದ. ರಾಜಾರಾಮ.

''ಏನು ಹುಚ್ಚಯ್ಯಾ ನೋಡಿಲ್ಲಿ'' ಎಂದು ಮಾಲಿಕ ಅವನೆದುರಿಗೆ ಪತ್ರಿಕೆಯನ್ನು ಹಿಡಿದ.

''ಇನ್ಸಪೆಕ್ಟರ ಕೊಲೆಯಾಗಿಲ್ಲ. ಅವರು ಕೊಲೆಯ ಪತ್ತೆ ಹಚ್ಚುತ್ತಿದ್ದಾರೆ. ಅಕ್ಷರ ದೋಷದಿಂದ ಹಾಗಾಗಿದೆ.''–ನಿರ್ವಿಕಾರದಿಂದ ನುಡಿದ ಅವನ ಮಾತು ಕೇಳಿ ಎಡಬಲದಲ್ಲಿದ್ದವರಿಗೆ ನಿರಾಶೆಯಾಯಿತು. ''ಏನು

ಪತ್ರಿಕೆ ನಿನ್ನದು ರಾಜಾರಾಮ ತಿರುವು ಮುರುವು. ಸುಮ್ಮನೆ ಅದನ್ನು ನಿಲ್ಲಿಸಿಬಿಡಬಾರದೆ?" - ಅಸಹನೆಯ ಆಳದಿಂದ ಧ್ವನಿ ಹೊರಬಂದಿತ್ತು.

''ಅದರಿಂದ ಪ್ರಾಪ್ತಿಯಿರುವಾಗ ಹೇಳಿ ಅದನ್ನು ಹೇಗೆ ಧೈರ್ಯದಿಂದ ನಿಲ್ಲಿಸುವದು. ನಿಮ್ಮ ಹೋಟಲಿನಲ್ಲಿಯ ಸಾಮಾನು ಚೆನ್ನಾಗಿಲ್ಲವೆಂದರೆ ನೀವು ಅಂಗಡಿಯನ್ನು ನಿಲ್ಲಸುವಿರಾ? ಅದರಿಂದಲ್ಲವೇ ನೀವು ಇದನ್ನು ಸಂಪಾದಿಸಿದ್ದು.'–ಎಂದು ಅವರ ನೀಳವಾದ ಹೊಟ್ಟೆಯ ಮೇಲೆ ಚಿಕ್ಕಬಾಲಕ ಆನೆಯ ಹೊಟ್ಟೆಯ ಮೇಲೆ ವಿಸ್ಮಯದಿಂದ ಕೈಯಾಡಿಸಿದಂತೆ ಕೈಯಾಡಿಸಿದ. ಹೋಟೆಲ್ ಮಾಲಿಕನಿಗೆ ತನ್ನ ಲಂಬೋದರದ ವಿಷಯವಾಗಿ ವಿಶೇಷವಾದ ಹೆಮ್ಮೆ. ಇದೆ ಕಾರಣದಿಂದ ಆತ ರಾಜಾರಾಮನ ಕೃತಿಯಿಂದ ಸಂತುಷ್ಟನ್ನಾಗಿ ಪ್ರಸನ್ನತೆಯ ಮುಗುಳ್ನಗೆಯನ್ನು ತನ್ನ ದಪ್ಪವಾದ ತುಟಿಗಳಿಂದ ಹೊರಸೂಸುತ್ತ ಠೀವಿಯಿಂದ ಯೋಧನಂತೆ ಹೆಜ್ಜೆಹಾಕಿದ. ಯಾವ ಮನುಷ್ಯನಿಗೆ ಯಾವ ಜಾಲ ಬೀಸಬೇಕೆಂಬುದುರಲ್ಲಿ ಪಳಗಿದ ಕೈ ಅವನದು.

''ರಾಜಾರಾಮ ನೀವು ಇನ್ಸಪೆಕ್ಟರು ಕ್ಲಾಸಮೇಟೆ?.''

— ಸುಬ್ರಹ್ಮಣ್ಯ ತನ್ನೆಡೆಗೆ ಅವನ ಲಕ್ಷ್ಯವನ್ನು ಸೆಳೆದ.

''ಹೌದು ಅದು ಗತಕಾಲದ ನೆನಪಿನಂತಿದೆ. ಇಂದು ಅವನು ಇನಸ್ಪೆಕ್ಟರ ಆದರೆ ನಾನು ಮುರುಕು ಪತ್ರಿಕೆಯ ಸಬ್ ಎಡಿಟರ್ ದೇವರು ಯಾರನ್ನು ಎಂಥ ಸ್ಥಿತಿಯಲ್ಲಿಡುತ್ತಾನೋ ಏನೋ? ಎಲ್ಲಾ ಭಗವಂತನ ಮಾಯೆ.''–ರಾಜಾರಾಮ ಶ್ರದ್ಧಾವಂತ ಆಸ್ತಿಕರಂತೆ ಪರಮಾತ್ಮನ ಮೇಲಿನ ತನ್ನ ಭಕ್ತಿಯನ್ನು ಪ್ರದರ್ಶಿಸಿದ.

"ಆದರೆ ನಿಮ್ಮ ಪತ್ರಿಕೆಯಲ್ಲಿ ಯಾವ ಬಿಸಿಯಾದ ಸುದ್ದಿಗಳು ಪ್ರಕಟವಾಗುವದಿಲ್ಲ. ಇನ್ಸಪೆಕ್ಟರ ಎಷ್ಟಾದರೂ ನಿಮ್ಮ ಫ್ರೆಂಡ.''

''ಆಗೀಗ ಅವನನ್ನು ಭೆಟ್ಟಿಯಾಗಿ ಸುದ್ದಿಯನ್ನು ಸಂಗ್ರಹಿಸುತ್ತೇನೆ. ಆದರೆ ದೇವರು ಒಲಿದರೂ ಪೂಜಾರಿ ಒಲಿಯನೆಂಬಂತೆ ಅಧಿಕಾರಿ ನನ್ನ ಗೆಳೆಯನಾದರೂ ಈ ಪೋಲೀಸರ ವಜ್ರಹಿಡಿತದಿಂದ ಪಾರಾಗುವದೆ ಕಷ್ಟವಾಗಿದೆ.''

''ಹೋಗಲಿಬಿಡಿ ಈ ಅಶ್ವತ್ಥರಾಯರ ಕೊಲೆಯ ಪ್ರಕರ್ಣ ಎಲ್ಲಿಗೆ ಬಂದಿದೆ?''

“ಮಂದವಾಗಿಯೇ ಸಾಗಿದೆಯೆಂದು ಕಾಣುತ್ತದೆ”ಎನ್ನುತ್ತ ಇಬ್ಬರೂ ಹೊರಬಿದ್ದರು. ರಾಜಾರಾಮ ದಾರಿಯಲ್ಲಿ ಉಪಾಯವಾಗಿ ಸುಬ್ರಹ್ಮಣ್ಯನ ಚರಿತ್ರೆಯನ್ನು ಹೊರಪಡಿಸಿದ. ಸುಬ್ರಹ್ಮಣ್ಯ ಇಲ್ಲಿದ್ದು ೧೦-೧೫ ವರುಷ ಗಳಾದವಂತೆ. ಮೊದಲು ಮಿಲಿಟರಿಯಲ್ಲಿದ್ದ. ಈಗ ಆರಾಮವಾಗಿ ಪೆನ್ಶನ್ನು ದೊರೆಯುತ್ತಿತ್ತು. ಮಕ್ಕಳಿಲ್ಲ ಮರಿಯಿಲ್ಲ. “ರಾಜಾರಾಮ ನಿಮ್ಮ ಲಗ್ನವಾಗಿಲ್ಲವೇನು?”

“ಛೀ ಛಿ ಪರತಂತ್ರ ಜೀವನ ನನಗೆ ಸೇರುವದಿಲ್ಲ ಸ್ವಚ್ಛಂದವಾಗಿ ಜೀವಿಸಬೇಕೆಂಬುವದೆ ನನ್ನ ಉದ್ದೇಶ.”

“ರಾಜಾರಾಮ ನೀವು ಇರುವದೆಲ್ಲಿ?”

“ಅಲ್ಲಿ ದೂರದಲ್ಲಿ ಚಿಕ್ಕ ಚಿಕ್ಕ ಮನೆಗಳು ಕಾಣುವವಲ್ಲ ಅಲ್ಲಿಯೇ ಇದ್ದೇನೆ. ಅದೇ ನಮ್ಮ ಆಫೀಸು. ಅದೇ ನಮ್ಮ ನಿವಾಸ. ಮೇಲಿಂದ ಮೇಲೆ ಆಫೀಸಿಗೆ ತೆರಳಬೇಕಾಗುವದರಿಂದ ಅನುಕೂಲತೆಗಾಗಿ ಅಲ್ಲಿಯೇ ಇದ್ದೇನೆ-” ಎಂದು ಮಾರ್ಮಿಕವಾಗಿ ನಕ್ಕು-“ಅಂದಹಾಗೆ ನಿಮ್ಮ ಹೆಂಡತಿ ಎಲ್ಲಿ ಕೆಲಸ...............”

“ಅಲ್ಲಿ ದೂರದಲ್ಲಿ ಕಾಣುವದಲ್ಲವೇ ನಿಮ್ಮ ಆಫಿಸು.” ನಡುವೆಯೇ ಸುಬ್ರಹ್ಮಣ್ಯ ಕೇಳಿದ.

“ಹೌದು ಅಲ್ಲಿಯೇ.” ಹಳೆಯ ಕಾಲದ ಒಂದು ದೊಡ್ಡ ಮನೆ ಯದು. ಆ ಮನೆಯಲ್ಲಿಯೇ ಹತ್ತೆಂಟು ವಿಭಾಗ ಮಾಡಿ ಅನೇಕ ಸಂಸಾರ ಗಳು ವಾಸಮಾಡುತ್ತಿದ್ದವು. ರಾಜಾರಾಮ ಮೆಟ್ಟಲುಗಳನ್ನೇರಿ ಅಲ್ಲಿ ಇಲ್ಲಿ ತಿರುಗುತ್ತ ಕಡೆಗೆ ಮೂಲೆಯಲ್ಲಿರುವ ಒಂದು ರೂಮನ್ನು ತಲುಪಿದ. ಗೆಳೆಯರಿಬ್ಬರೂ ಒಳಗೆ ಪ್ರವೇಶ ಮಾಡಿದರು. ನೂರಾರು ಹಾಳೆಗಳ ರಾಶಿಯಲ್ಲಿ ಕೊಟಡಿ ಬೆಳ್ಳಗಾಗಿ ಕಾಣುತ್ತಿತ್ತು. ಒಂದು ಟೆಬಲ್ಲು, ಅದರ ಬದಿಯಲ್ಲಿಯೇ ಒಂದು ಚೇರು. ಟೇಬಲ್ಲಿನಮೇಲೆ ಸಾಮಾನುಗಳು ಅಸ್ತ ವ್ಯಸ್ತವಾಗಿ ಬಿದ್ದಿದ್ದವು. ವ್ಯವಸ್ಥೆ ಎನ್ನುವದು ಹುಡುಕಿದರೂ ದೊರೆಯು ತ್ತಿರಲಿಲ್ಲ. ಅಲ್ಲಿಯೇ ಮೂಲೆಯೊಂದರಲ್ಲಿ ರಾಜಾರಾಮನ ನಿವಾಸ. ಒಂದು ಹಾಸಿಗೆ ಸುರುಳಿ, ತಂಬಿಗೆ, ಬಕ್ಕೆಟ್ಟುಗಳಿದ್ದವು. ರಾಜಾರಾಮ ಅನುಮಾನಿಸದೆ ಅಲ್ಲಿ ಕುಳಿತುಕೊಂಡ. ಸುಬ್ರಹ್ಮಣ್ಯನಿಗೆ ಮಾತ್ರ ಅಲ್ಲಿ ಕುಳಿತುಕೊಳ್ಳಲು ಸಂಕೋಚವೆನಿಸಿತೆಂದು ಕಾಣುತ್ತದೆ.

''ಸುಬ್ರಹ್ಮಣ್ಯ ಅಲ್ಲಿ ಚೇರಿದೆ ನೋಡಿ ಅಲ್ಲಿ ಕುಳಿತುಕೊಳ್ಳಿ. ಆದರೆ ಸ್ವಲ್ಪ ಎಚ್ಚರಿಕೆ ತೆಗೆದುಕೊಳ್ಳಿ ಆಚೀಚೆ ಬ್ಯಾಲನ್ಸ ತಪ್ಪಿದರೆ ಭೂಶಾಯಿ ಯಾಗಬೇಕಾಗುತ್ತದೆ.''

''ಅಂದರೆ ನಿಮ್ಮ ಚೇರಿನಮೇಲೆ ಕೂಡ್ರುವದೆಂದರೆ ಅದೊಂದು ಬಗೆಯ ಸರ್ಕಸ್ಸೆನ್ನಿ.''

''ಇಲ್ಲಿ ಬರುವದೇ ಒಂದು ಸರ್ಕಸ್ಸು. ಮೆಟ್ಟಲುಗಳನ್ನು ನೋಡಿದಿ ರಲ್ಲಾ ಹೇಗಿವೆ. ಯಾವ ಹೊತ್ತಿನಲ್ಲಿ ಭಗವಂತನಿಂದ ಕರೆ ಬರುವದೋ ಎನ್ನಿಸುತ್ತದೆ ಅದನ್ನೇರುವಾಗ. ಮಳೆಗಾಲದಲ್ಲಿ ಮೇಲಿನಿಂದ ಬೀಳುವ ವರ್ಷಧಾರೆ. ಅದರಲ್ಲಿ ಮಿಾಯುವ ನಮ್ಮ ಕರುಣಾಜನಕ ಹಾಸ್ಯಸ್ಥಿತಿ.''

—ತನ್ನ ಕೊಟಡಿಯ ರಾಮಾಯಣವನ್ನು ಸಂಕ್ಷಿಪ್ತವಾಗಿ ವರ್ಣಿಸಿದ. ಅವನು ಅತ್ತಿತ್ತ ಹುಡುಕುವ ಪರದಾಟವನ್ನು ನೋಡಿ ಸುಬ್ರಹ್ಮಣ್ಯ.—

''ಆ ರೀತಿಯಾಗಿ ಹುಡುಕುತ್ತಿರುವದೇನು?'' ಎಂದು ಕೇಳಿದ

''ಅದೇ ಅದೇ ಸಕಲವನ್ನು ಮರೆಯಿಸುವ ಸಂಜೀವಿನಿ ಸಿಗರೇಟು ಬೆಳಗಿನಲ್ಲಿ ಬರುವಾಗ ಇಲ್ಲಿ ಎಲ್ಲಿಯೋ ಇಟ್ಟುಬಂದೆ. ಈಗ ದೊರೆಯ ಲೊಲ್ಲದು. ಬಹುಶ ನಮ್ಮ ಸಂಪಾದಕರ ವಕ್ರದೃಷ್ಟಿ ಅದರಮೇಲೆ ಹರಿ ದಿರಬಹುದು.'' ''ನನ್ನ ಹತ್ತಿರವಿದೆ ಹಿಡಿಯಿರಿ.'' ಸುಬ್ರಹ್ಮಣ್ಯ ಅವನೆದು ರಿಗೆ ಪ್ಯಾಕ ಹಿಡಿದ. ''ಥ್ಯಾಂಕ್ಸ ಬಹಳ ಥ್ಯಾಂಕ್ಸ'' ಎನ್ನುತ್ತ ರಾಜಾರಾಮ ಪುಕ್ಕಟೆ ಸಿಗರೇಟನ್ನು ಬಾಯಿಗಿರಿಸಿದ.

ಸಿಗರೇಟು ದೊರಕಿಸಲು ಅವನ ಉಪಾಯವೋ ಏನೋ ಇದು? ಸಿಗರೇಟ ಸೇದುತ್ತ ರಾಜಾರಾಮ—

''ಸುಬ್ರಹ್ಮಣ್ಯ ನಿಮ್ಮ ಮನೆಯವರು ಎಲ್ಲಿ ಕೆಲಸ ಮಾಡುತ್ತಾ...'' ಅವನು ವಾಕ್ಯವನ್ನಿನ್ನು ಪೂರ್ಣವೆಂದಿರಲಿಲ್ಲ.—''ಇಲ್ನೋಡಿ ಇದು ಯಾರದು?'' ಎಂದು ಒಂದು ೫ ರೂಪಾಯಿಯ ನೋಟನ್ನು ಸುಬ್ರಹ್ಮಣ್ಯ ಹಾಳೆಯ ಸಂದಿನಿಂದ ತೆಗೆದು ತೋರಿಸಿದ. ನೋಟನ್ನು ಕಾಣುತ್ತಲೇ ಅವನಕಣ್ಣು ಹೊಳೆದವು. ''ನಮ್ಮ ಸಂಪಾದಕರ ಮರವೆಯ ಫಲವೆಂದು ಕಾಣುತ್ತದೆ.''—ಆ ನೋಟು ರಾಜಾರಾಮನ ಕಿಸೆಯನ್ನು ಸೇರಿತ್ತು.

"ನೀವು ಇನಸ್ಪೆಕ್ಟರರನ್ನು ಕೇಳಿ ನಿಮ್ಮ ಪತ್ರಿಕೆಯಲ್ಲಿ ಏಕೆ ಹೊಸ ಸುದ್ದಿಗಳನ್ನು ಹಾಕುವದಿಲ್ಲ. ಅದರಿಂದ ಓದುವವರ ಸಂಖ್ಯೆ ಹೆಚ್ಚಾಗ ಬಹುದು.

"ನಿಮ್ಮ ಸಲಹೆಯೇನೋ ಚೆನ್ನಾಗಿದೆ. ನಮ್ಮ ಸಂಪಾದಕರು ಸಹ ಇದೆ ಮಾತನ್ನು ಪದೆ ಪದೆ ಹೇಳುತ್ತಿರುತ್ತಾರೆ. ಆ ರೀತಿಯಾಗಿ ನಾನು ಯೋಚಿಸುವೆ. ಆದರದು ಕೃತಿಯಲ್ಲಿ ಬರಲೊಲ್ಲದು." ರಾಜಾರಾಮ ಅರೆ ಮನಸ್ಸಿನಿಂದ ಹೇಳಿದ.

"ಈಗ ನೋಡಿ ಅಶ್ವತ್ಥರಾಯರ ಕೊಲೆಯ ವಿಷಯ ಬಹಳ ಪ್ರಚಾರದಲ್ಲಿದೆ. ಪೋಲೀಸರಾದರೂ ಏನನ್ನಾದರೂ ಶೋಧ ಮಾಡಿಯೇ ಮಾಡುತ್ತಾರೆ. ಅವನ್ನು ನೀವು ಪ್ರಕಟಿಸಿದರೆ ನಿಮ್ಮ ಪತ್ರಿಕೆಗೆ ಶುಕ್ರದೆಸೆ ಒದಗ ಬಹುದು." ರಾಜಾರಾಮ ಅವನ ಸಲಹೆಯನ್ನೊಪ್ಪಿ ಹೊಸ ಸುದ್ದಿಗಳನ್ನು ಸಂಗ್ರಹಿಸುವೆನೆಂದ. ಸುಬ್ರಹ್ಮಣ್ಯ ಮತ್ತೆ ಭೆಟ್ಟಿಯಾಗುವದಾಗಿ ಹೇಳಿ ತೆರಳಿದ. ರಾಜಾರಾಮನ ಮನದಲ್ಲಿ ವಿಚಾರಗಳ ತುಮುಲ ಆರಂಭ ವಾಗಿತ್ತು. ಸುಬ್ರಹ್ಮಣ್ಯ ಚತುರನಾದ ವ್ಯಕ್ತಿಯೆಂಬುದರಲ್ಲಿ ಅವನಿಗೆ ಸಂದೇಹ ಉಳಿದಿರಲಿಲ್ಲ. ಇವನು ಯಾಕೆ ಬಳಸಿ ಬಳಸಿ ಅಶ್ವತ್ಥರಾಯರ ಕೊಲೆಯ ಸುದ್ದಿಯನ್ನು ಮಾತನಾಡುತ್ತಿದ್ದಾನೆ? ಯಾರದಾದರೂ ಗುಪ್ತ ಚಾರನಾಗಿ ಸಂಚಾರ ಮಾಡುತ್ತಿದ್ದಾನೆಯೆ? ರಾಮಯ್ಯನೆದುರಿಗೆ ಒಂದು ಸುಳ್ಳು ಹೇಳಿದ. ನನ್ನೆದುರಿಗೆ ಮಿಲ್ಟ್ರಿಯಲ್ಲಿದ್ದೆನೆಂದು ಹೇಳುತ್ತಾನೆ. ಒಳ್ಳೆ ಧನಿಕನಂತೆ ಹಣವನ್ನು ಖರ್ಚು ಮಾಡುತ್ತಾನೆ. ಹೆಂಡತಿಯಮೇಲಂತೂ ಇವನ ನಿರ್ಭರವಿಲ್ಲ. ಹೆಂಡತಿಯ ವಿಷಯ ತೆಗೆದೊಡನೆಯೆ ವಿಷಯವನ್ನು ಮರೆಸುತ್ತಾನೆ. ಈ ೫ ರೂಪಾಯಿಗಳಂತು ನಮ್ಮ ಸಂಪಾದಕರಿಡಲು ಸಾಧ್ಯವಿಲ್ಲ. ಇದೆಲ್ಲ ಅವನ ಕೈಚಳಕ. ಈ ಕೊಲೆಯಲ್ಲಿ ಇವನದೇನಾ ದರೂ ಅಂಗವಿದೆಯೇ?

ಮಧ್ಯರಾತ್ರಿಯ ಸಮಯ. ನೀರವತೆ ತಾನೆ ತಾನಾಗಿ ತಾಂಡವ ನೃತ್ಯವನ್ನು ಸ್ವಚ್ಛಂದವಾಗಿ ಗೈಯುತ್ತಿತ್ತು. ಸಾಗರದಂತೆ ವಿಶಾಲವಾಗಿ ಕತ್ತಲೆ ದೂರ ದೂರದವರೆಗೆ ಹಬ್ಬಿಕೊಂಡಿತ್ತು. ನಿಸರ್ಗದೇವಿ ತನ್ನ ಸೃಷ್ಟಿ ಯನ್ನು ಪರೀಕ್ಷಿಸಲು ಹೊರಟಾಗ ಅವಳ ಕಪ್ಪಾದ ಸೆರಗು ಬಿದ್ದು ನಿಶೆ

ಕವಿದಂತಿತ್ತು. ವಿದ್ಯುದ್ದೀಪಗಳು ತಮ್ಮ ಹತ್ತಿರವಿದ್ದ ಕತ್ತಲೆಯನ್ನು ಹೊಡೆದೋಡಿಸಿ ಅಲ್ಪ ತೃಪ್ತಿಯನ್ನು ಪಡುತ್ತಿದ್ದವು. ವಿಶಾಲವಾದ ಬೀದಿಗಳು ನಿರ್ಜನವಾಗಿ, ನಿಶ್ಶಬ್ದವಾಗಿ ಮಸಣದಂತೆ ಭಯಾನಕವಾಗಿದ್ದವು. ಮಾರ್ಗದ ಮೇಲೆ ಬಿದ್ದಿರುವ ತುಣುಕು ಹಾಳೆಗಳು ಗಾಳಿಯ ರಭಸಕ್ಕೆ ಸರ್ರೆಂದು ಶಬ್ದ ಮಾಡುತ್ತ ಓಡುತ್ತಿದ್ದವು. ಶಶಿ ಕಾರ್ಮೋಡಗಳ ಬದಿಯಿಂದ ಒಮ್ಮೆ ಕಾಣಿಸುತ್ತಿದ್ದ, ಒಮ್ಮೆ ಅವುಗಳ ಹಿಂದೆ ಮರೆಯಾಗುತ್ತಿದ್ದ. ಯಾರಾದರೂ ಸ್ವಲ್ಪ ಸಪ್ಪಳವನ್ನು ಮಾಡಿದರೆ ಸಾಕು ಧ್ವನಿ ಪ್ರತಿಧ್ವನಿಗೊಂಡು ಅನಿಲದೊಡನೆ ಅನಿಲವಾಗಿ ಬೆರೆಯುತ್ತಿತ್ತು. ಎಷ್ಟು ದೂರ ಸಾಗಿದರೂ ಮುಗಿಯದಂತೆ ನಿರ್ಜನತೆ ಮರೀಚಿಕೆಯಂತೆ ಮುಂದೆ ಮುಂದೆ ಸಾಗುತ್ತಿತ್ತು. ಹಗಲು ಗದ್ದಲವೆಬ್ಬಿಸುವ ಮೋಟಾರು, ಕಾರುಗಳು ಚಲನವಲನ ಹೀನವಾಗಿ ಬಿದ್ದಲ್ಲಿಯೇ ಬಿದ್ದುಕೊಂಡಿದ್ದವು. ದೂರದಿಂದ ನಾಯಿಗಳು ಬಡಿದಾಡುವ ಶಬ್ದ ಅಸ್ಪಷ್ಟವಾಗಿ ಕಿವಿಗೆ ಬಿದ್ದು ಮಾಯವಾಗುತ್ತಿತ್ತು. ನಗರ ತಾಯಿಯ ಮಗ್ಗುಲಲ್ಲಿ ಮಗುವಿನಂತೆ ನಿರಾಲೋಚನೆಯಿಂದ ದೀರ್ಘ ನಿದ್ರೆಗೈಯ್ಯುತ್ತಿತ್ತು. ಕೊರೆವ ಚಳಿಯೊಡಗೂಡಿದ ಇರುಳು ಸುತ್ತಲೂ ದಟ್ಟವಾಗಿ ತನ್ನ ಜಾಲವನ್ನು ನೇಯುತ್ತಿತ್ತು. ಕಾರಖಾನೆಗಳ ಚಿಮಣಿಯಿಂದ ಬರುವ ಬಿಳಿಯ ಹೊಗೆ ಸುರುಳಿ ಸುರುಳಿಯಾಗಿ ಹವೆಯೊಡನೆ ಕಲೆಯುತ್ತಿತ್ತು. ಚಂದಿರನನ್ನು ಬೆಂಬತ್ತಿ ಓಡುವ ಬಿಳಿಯದಾದ ಮೋಡಗಳು ನೀಲಿ ಸಾಗರದಲ್ಲಿ ತೇಲುತ್ತಿರುವ ಹಾಯಿಗಳಂತೆ ಕಾಣುತ್ತಿದ್ದವು ಇರುಳು ಅಡ್ಡಾಡುವವರನ್ನು ದಿಗಿಲುಪಡಿಸಿ ಮರುಳು ಮಾಡುತ್ತಿತ್ತು.

ವೀಣಳಿಗೆ ಒಮ್ಮೆಲೆ ಎಚ್ಚರವಾಯಿತು ಯಾಕೆಂದು ಅವಳಿಗೆ ಮೊದಲು ತಿಳಿಯಲಿಲ್ಲ. ಹೊರಗಿನ ಯಾವವಾದರೂ ಶಬ್ದದಿಂದ ಎಚ್ಚತ್ತೆನೇನೋ ಎಂದು ಆ ಶಬ್ದವನ್ನಾಲಿಸಿದಳು. ಆದರೆ ಶಾಂತತೆ ಕತ್ತಲೊಡನೆ ಅಮಿತ ಪ್ರೇಮದಿಂದ ಒಂದುಗೂಡಿತ್ತು. ಸ್ವಲ್ಪ ಹೊತ್ತು ಎಚ್ಚರವಿದ್ದು ಶಬ್ದವನ್ನಾಲಿಸಿದಳು. ಆದರೆ ಏನೂ ಕೇಳಿಸದ್ದರಿಂದ ಮತ್ತೆ ನಿದ್ರಿಸತೊಡಗಿದಳು. ಪುನಃ ಎಚ್ಚರವಾಯಿತು. ಗಾಳಿಗೆ ಆಗೀಗ ಕಿಟಕಿಯ ಬಾಗಿಲುಗಳು ಬಡಿದು ರಪ್ ಎಂದು ಶಬ್ದ ಮಾಡುತ್ತಿದ್ದವು. ಅದರಿಂದಂತು ತನಗೆ ಎಚ್ಚರವಾಗಲಿಲ್ಲವೆಂಬುದು ಅವಳಿಗೆ ನಿರ್ಧರವಾಗಿತ್ತು. ಈಗ

ಯಾರೊ ಅಡ್ಡಾಡುವ ಹೆಜ್ಜೆಯ ಸಪ್ಪಳವಾಯಿತು. ಜಾಗರೂಕತೆಯಿಂದ ಆಲಿಸಿದಳು. ಆ ನೀರವತೆಯಲ್ಲಿ ಅವಳಿಗದು ಸ್ಫುಟವಾಗಿ ಕೇಳಿಬರುತ್ತಿತ್ತು. ಯಾರೋ ಉಳಿದವರಿಗೆ ತಿಳಿಯಬಾರದೆಂದು ಬಹು ಮೆಲ್ಲನೆ ಅಡಿಯಿಡುತ್ತಿದ್ದರು. ವೀಣಳಿಗೆ ಸ್ವಲ್ಪ ಗಾಬರಿಯಾಗಿ ಇಲ್ಲದ ಯೋಚನೆಗಳು ಅವಳ ಮನವನ್ನು ಕವಿದುಕೊಂಡವು. ಕಗ್ರಿಗಿನ ಅರಿವೆಯೊಂದನ್ನು ಕತ್ತರಿಸಿ ಅವಳ ರೂಮಿಗೆ ಹೊದಿಸಿದಂತೆ ಕತ್ತಲೆ ಕವಿದಿತ್ತು. ಆ ಕತ್ತಲೆಯಲ್ಲಿ ಯಾವದೋ ಕಪ್ಪಾದ ವ್ಯಕ್ತಿ ಯಮದೂತನಂತೆ ಬಂದಂತೆ ಭ್ರಮೆಯಾಗುತ್ತಿತ್ತು ಅವಳಿಗೆ. ತಾನು ಮಲಗುವಾಗ ಬಾಗಿಲು ಹಾಕಿದ್ದು ಅವಳಿಗೆ ನೆನಪಿತ್ತು. ಆದರೆ ಒಂದು ವೇಳೆ ಮರೆತು ಮಲಗಿದ್ದರೆ? ಎಂಬ ಸಂಶಯದ ಹುಳ ಅವಳ ಮನವನ್ನು ಉಕ್ಕಿನುಗುರುಗಳಿಂದ ಬಗೆದಂತೆ ಕೊರೆಯತೊಡಗಿತು. ಮುಸುಕನ್ನು ಬಿಗಿಯಾಗಿ ಎಳೆದುಕೊಂಡಳು. ಆದರೆ ಒಳಗಿನ ಭೀತಿ ಎಲ್ಲಿ ಮಾಯವಾಗಬೇಕು? ಒಮ್ಮೆ ಸಪ್ಪಳ ಕೇಳಿಬರುತ್ತಿತ್ತು. ಒಮ್ಮೆ ಮಾಯವಾಗುತ್ತಿತ್ತು. ಅದು ತನ್ನ ಭ್ರಮೆಯಿರಬಹುದೆಂದು ಒಮ್ಮೊಮ್ಮೆ ಭಾಸವಾಗುತ್ತಿತ್ತು, ಆದರೆ ಹೊರಗಿನ ಹೆಜ್ಜೆಯ ಧ್ವನಿ ಅವಳ ಆಭಾಸವನ್ನು ಕತ್ತರಿಸಿ ಸತ್ಯವೆಂದು ಸಾರುತ್ತಿತ್ತು. ನಂಬಿಕೆ ಸಂಶಯಗಳ ಸಂಧಿಗ್ಧತೆಗಳಲ್ಲಿ ಅವಳು ಉಯ್ಯಾಲೆಯಾಡುತ್ತಿದ್ದಳು. ಮುಂದೆ ಶಬ್ದ ಬರುವದು ನಿಂತುಹೋಯಿತು. ಅದರಿಂದ ಸ್ವಲ್ಪ ಸಮಾಧಾನವೆನಿಸಿತು. ಆದರೆ ಮರುಕ್ಷಣದಲ್ಲಿಯೇ ತೋಟದಲ್ಲಿಯ ಗಿಡಗಳು ಅಲ್ಲಾಡಿದಂತೆ ಶಬ್ದ ಕೇಳಿಬಂದಿತು. ಆದರೆ ಅದು ಗಾಳಿಯ ಚೇಷ್ಟೆ ಎಂದು ಸುಮ್ಮನಾದಳು. ಆದರೆ ಅಲ್ಲಿಂದಲೇ ಶಬ್ದ ಮೇಲಿಂದ ಮೇಲೆ ಬರುತ್ತಿತ್ತು. ವೀಣಳಿಗೆ ಅದೇನೆಂದು ಎದ್ದು ನೋಡುವ ಧೈರ್ಯವಿರಲಿಲ್ಲ. ಯಾರೋ ತನ್ನನ್ನು ನಿಟ್ಟಿಸಿ ನೋಡುತ್ತಿದ್ದಾರೆಂದು ಅವಳ ತಿಳುವಳಿಕೆ. ಕವಿದ ಕತ್ತಲೆ ಅವಳೊಡನೆ ಅಣಕವಾಡುತ್ತಿತ್ತು. ಆ ನಿಶೆಯಲ್ಲಿ ತಾನೆ ಯಾವದ್ಯಾವದೋ ರೂಪವನ್ನು ನಿರಾಯಾಸವಾಗಿ ರೂಪಿಸುತ್ತಿದ್ದಳು. ಆದರೂ ಆ ಶಬ್ದ ಎಲ್ಲಿಂದ ಬರುವದೆಂಬುದನ್ನು ನೋಡಿಯೇ ತೀರಬೇಕೆಂಬ ಅಪರಿಮಿತ ಧೈರ್ಯದಿಂದ ಕಿಟಕಿಯ ಎಡೆಗೆ ತಪ್ಪು ಹೆಜ್ಜೆ ಇಡುತ್ತ ಸಾಗಿದಳು. ಹೊರಗಿನವರಿಗೆ ತಾನು ಕಾಣದಂತೆ ತೋಟದಲ್ಲೆಲ್ಲ ಒಮ್ಮೆ ದೃಷ್ಟಿಯನ್ನು ಹಾಯಿಸಿದಳು. ಆದರೆ ಯಾವ ಸುಳಿವು,

ಉಲಿವುಗಳಾಗಲಿ ಕಂಡುಬರಲಿಲ್ಲಿ. ಬಾಗಿಲು ಹಾಕಿ ತಿರುಗಿ ಬಂದು ಯೋಚನೆಯಿಂದ ಕಣ್ಣು ಮುಚ್ಚಿದಳು. ೫-೧೦ ನಿಮಿಷಗಳು ಕಳೆದ ತರುವಾಯ ಮತ್ತೆ ಶಬ್ದ ಅಸ್ಫುಟವಾಗಿ ಬಂದಿತು. ಈಗವಳಿಗೆ ನಿಜವಾಗಿ ವಿಸ್ಮಯವಾಯಿತು. ತನ್ನನ್ನು ಯಾರೋ ನೋಡಿದ್ದಾರೆಂದು 'ಅವಳಿಗನಿಸಿತು. ಈಗ ಹೆಚ್ಚಿಗೆ ಜಾಗರೂಕತೆಯಿಂದ ಕಿಟಕಿಯ ಹತ್ತಿರ ಬಂದಳು. ಕೈ ಕಾಲುಗಳು ಕಂಪಿಸುತ್ತಿದ್ದವು. ಈ ಮನೆಯಲ್ಲಿ ಏನೋ ನಡೆದಿರುವದೆಂಬ ಭಾವನೆ ಅವಳಿಗೆ ಮೊದಲಿನಿಂನಲೂ ಇತ್ತು. ಈ ರಾತ್ರಿಯ ದೃಶ್ಯ ಅವಳ ವಿಶ್ವಾಸವನ್ನು ಧೃಡೀಕರಿಸುತ್ತಿತ್ತು. ದೆವ್ವಗಳಲ್ಲಿ ಅವಳಿಗೆ ಅಷ್ಟಾಗಿ ನಂಬಿಕೆಯಿರಲಿಲ್ಲ, ಅದರ ವಿಷಯವಾಗಿ ಅನುಭವವು ಇರಲಿಲ್ಲ. ಕತೆ ಕಾದಂಬರಿಗಳಲ್ಲಿಯ ದೆವ್ವ, ಭೂತಗಳ ವಿಷಯವನ್ನು ಓದಿಯೇ ಅವಳ ಅನುಭವ ತೃಪ್ತಿಯನ್ನು ಪಡುತ್ತಿತ್ತು. ವಾಸ್ತವಿಕ ಜೀವನದ ಕಟುತೆ, ವಿಷಮತೆಗಳು ಅವಳ ಜೀವನವನ್ನು ಪ್ರವೇಶಿಸಿರಲಿಲ್ಲವಿನ್ನು. ಕಿಟಕಿಯ ಹತ್ತಿರ ಬಂದ ವೀಣಾ ಅತಿ ಜಾಗರೂಕತೆಯಿಂದ ಹೊರಗೆ ಹಣಿಕಿಕ್ಕಿದಳು. ಪಿಳಿ ಪಿಳಿ ಕಣ್ಣು ಬಿಡುತ್ತ ಯಾರೋ ಇವಳ ಕಿಟಕಿಯ ಹತ್ತಿರ ನೋಡುತ್ತಿದ್ದರು. ಅದನ್ನು ಕಂಡ ವೀಣಾ ಎಚ್ಚರದಪ್ಪಿ ಒಳಗೆ ಭೂಶಾಯಿಯಾಗಿದ್ದಳು.

ಮರುದಿನ ಬೆಳಗಿನಲ್ಲೆದ್ದ ವೀಣಳಿಗೆ ನಿನ್ನೆಯ ನೆನಪು ಮೈ ಜುಮ್ಮೆನಿಸುತ್ತಿತ್ತು. ಅದನ್ನೆ ಎಲ್ಲರಿದಿರಿಗೂ ಹೇಳಿದಳು ಅವಳ ಮಾತನ್ನು ಕೇಳಿ ನಾರಾಯಣ—

"ನಿನಗೆಲ್ಲೊ ಹುಚ್ಚು ಭ್ರಮೆ ಇಡೀ ರಾತ್ರಿ ನಾನು ಪುಸ್ತಕವನ್ನೋದುತ್ತ ಕುಳಿತಿದ್ದೆ. ನನಗ್ಯಾವ ಶಬ್ದವು ಕಿವಿಗೆ ಕೇಳಿಬರಲಿಲ್ಲ ನಿನಗೇನು ಕೇಳಿಸಿತು." ಎಂದು ಅವಳ ಮಾತನ್ನಲ್ಲಗಳೆದ.

ಅದು ಸುಳ್ಳಿರಲು ಸಾಧ್ಯವೇ ಇಲ್ಲ, ನಿಜವಾಗಿ ನಡೆದ ಸಂಗತಿಯದು. ಯಾರೋ ನನ್ನನ್ನು ನೋಡುತ್ತ ನಿಂತಿದ್ದು ಚನ್ನಾಗಿ ನೆನಪಿದೆ."

"ಹಾಗಾದರೆ ಆ ವ್ಯಕ್ತಿ ಯಾರು ಹೇಳು?"

"ಅದನ್ನು ಮಾತ್ರ ಹೇಳಲು ಸಾಧ್ಯವಿಲ್ಲ. ಹೊರಗೆಲ್ಲ ಕತ್ತಲೆಯಿತ್ತು

ಸ್ವಲ್ಪ ಬೆಳಕಿನಲ್ಲಿಯೇ ಅವನನ್ನು ನೋಡಿದ್ದು. ಆ ಮೇಲೆ ನನಗ್ಯಾವದೂ ನೆನಪಿಗೆ ಬರಲಿಲ್ಲ.''

''ದಿನಾಲು ನಿನಗೆ ಭಯಾನಕ ಸುದ್ದಿಗಳನ್ನು ಕೇಳಿ ರೂಢಿಯಾಗಿದೆ. ಅದೆ ಕಾರಣದಿಂದ ನೀನು ಭಯದಿಂದ ಸ್ವಪ್ನ ಕಂಡಿರಬಹುದು. ಸ್ವಪ್ನಗಳಾದರೂ ಒಮ್ಮೊಮ್ಮೆ ನಡೆದ ಘಟನೆಗಳಂತೆ ಭಾಸವಾಗುತ್ತವೆ. ನನಗೆ ಯಾವ ಶಬ್ದವೂ ಕೇಳಲಿಲ್ಲ.''—ನಾರಾಯಣ ಅವಳಿಗೆ ಹೇಳಿದ.

''ನಾರಾಯಣ ನೀನು ಮಲಗಿಕೊಂಡ ಮೇಲೆಕೆ ಈ ಸುದ್ದಿ ಘಟಿಸಿರಬಾರದು.''

"ಹಾಗೂ ಇರಬಹುದು ಆದರೂ ಇದರಲ್ಲಿ ನಂಬಿಕೆಯಾಗಲೊಲ್ಲದು."

''ಮನುಷ್ಯರ ಧ್ವನಿ ನನಗೆ ಕೇಳಿಸುವದಿಲ್ಲವೇನು? ೬-೫ ಸಲ ಬಿಟ್ಟುಬಿಡದೆ ಅದೇ ಶಬ್ದವನ್ನು ಆಲಿಸಿದ್ದೇನೆ ಇನ್ಸಪೆಕ್ಟರರಿಗೆ ಈ ಸುದ್ದಿಯನ್ನು ತಿಳಿಸಬೇಕು."

—ವೀಣಾ ಅವನೊಡನೆ ಸೋಲಲಾರದೆ ವಾದಿಸಿ ಅವನನ್ನು ನಂಬಿಸಿದಳು.

''ನೀನು ಸತ್ಯವಾಗಿ ಆ ಸಂಗತಿಯನ್ನು ನೋಡಿದ್ದರೆ ಇನ್ಸಪೆಕ್ಟರರಿಗೆ ಹೇಳುವದೆ ಉಚಿತ ವೀಣಾ. ಯಾಕೆ ಈ ರೀತಿ ನಡೆಯುುವವೆಂಬುದು ನನಗೆ ತಿಳಿಯದಾಗಿದೆ.''

ವೀಣಳ ಹೊರತಾಗಿ ಆ ಶಬ್ದಗಳನ್ನು ಯಾರೂ ಕೇಳಿರಲಿಲ್ಲ.

ರಾಜಾರಾಮು ತನ್ನ ಗೆಳೆಯನ ದಾರಿಯನ್ನು ಅತ್ಯಂತ ಆತುರತೆ ಯಿಂದ ಹೋಟಲಿನಲ್ಲಿ ಕಾಯುತ್ತ ಒಂದಾದಮೇಲೊಂದರಂತೆ ಸಿಗರೇಟನ್ನು ಭಸ್ಮಗೊಳಿಸುತ್ತಿದ್ದ. ಇಂದು ಅವನು ಬಹಳ ಉತ್ಸಾಹದಲ್ಲಿದ್ದ. ಆದರ ಕಾರಣವು ಅವನಿಗೆ ತಿಳಿದಿದೆ. ಜೇಬಿನಲ್ಲಿ ೫ ರೂಪಾಯಿಯ ನೋಟು ಕಾಮಧೇನುವಿನಂತೆ ಕುಳಿತಿದೆ. ಬೆಳಗಾದರೆ ಕಾಸಿಗೆ ಯಾರ ಮೇಲೆ ಬಲೆಯನ್ನು ಬೀಸಲಿ ಎಂದು ತಲೆ ತುರಿಸಿಕೊಳ್ಳುತ್ತಿದ್ದ, ತಲೆ ಕಾಯಿಸಿಕೊಳ್ಳುತ್ತಿದ್ದ. ಆದರೆ ಇಂದು ಅದರ ಅಗತ್ಯವಿರಲಿಲ್ಲ. ಮಾನವ ಜೀವನವಲ್ಲಿ ಹಣದ ಪ್ರಭಾವ ಎಷ್ಟು ಪರಿಣಾಮಕಾರಿ! ಜೀವನವನ್ನು ಅದು ಯಾವ ರೀತಿಯಾಗಿ ತನ್ನ ಕೈಗೊಂಬೆಯಂತೆ ಕುಣಿಸುವದು! ಎಂಬೆಲ್ಲ ವಿಚಾರಗಳು ಅವನೆದುರಿಗೆ ಸುಳಿದು ಮರೆಯಾಗುತ್ತಿದ್ದವು. ಇಂದ ವನಿಗೆ ಲಕ್ಷ್ಮೀಪುತ್ರನೊಬ್ಬನ ಪರಿಚಯವಾಗಿತ್ತು. ಇಂಥ ಘಟನೆಗಳು ಅವನ ಜೀವನದಲ್ಲಿ ಹೆಚ್ಚಾಗಿ ಬರುತ್ತಿದ್ದಿಲ್ಲ ಬಂದರೂ ಅವು ಬೇಸಿಗೆ ಯಲ್ಲಿಯ ಮೋಡಗಳಂತೆ, ಮಳೆಗಾಲದಲ್ಲಿಯ ಬಿಸಿಲಿನಂತೆ ಹೊಳೆದು ಮಾಯವಾಗುತ್ತಿದ್ದವು. ಸುಬ್ರಹ್ಮಣ್ಯನನ್ನು ಹೇಗೆ ಹಿಡಿತದಲ್ಲಿಡಬೇಕೆಂಬ ವಿಷಯ ಅವನಿಗೆ ತಿಳಿದಿತ್ತು. ಅದೆ ಕಾರಣದಿಂದ ಉಲ್ಹಾಸ ಅವನ ನರ ನರಗಳಲ್ಲಿ ಉರುಬಿನಿಂದ ಉಕ್ಕುತ್ತಿತ್ತು. ಯಥಾವಿಧಿಯಾಗಿ ಮಾಲಿಕ ಇವನ ಬಳಿಗೆ ಬಂದು-"ಏನಯ್ಯ ಇಂದೇನೆನ್ನುತ್ತದೆ ನಿನ್ನ ತಿರುವು ಮುರುವು" ಎಂದು ಅವನ ಕೈಯಲ್ಲಿಯ ಪತ್ರಿಕೆಯ ಪುಟಗಳನ್ನು ತಿರುವಿದ. ಸುಬ್ರಹ್ಮಣ್ಯ ಇಲ್ಲಿಗೆ ಬರುವನೋ ಇಲ್ಲವೋ ಎಂಬ ಸಂಶಯ ಅವನಿಗೆ ಮೂಡಿತು. ಆದರೆ ಅವನು ಕೊಲೆಯ ಪ್ರಕರಣದಲ್ಲಿ ಬಹಳ ಆಸಕ್ತನಾಗಿದ್ದಾನೆ. ಅವನು ಬಂದೆಬರುತ್ತಾನೆಂದು ರಾಜಾರಾಮುನ ವಿವೇಕ ಬುದ್ಧಿ ನುಡಿಯು ತ್ತಿತ್ತು. ಸುಬ್ರಹ್ಮಣ್ಯ ಅಡಿಯಿರಿಸುತ್ತ "ನಾನು ಬರುವದು ಲೇಟಾಯಿತೆಂದು ಕಾಣುತ್ತದೆ" ಎಂದು ತನ್ನ ಕ್ಷಮಾಪಣೆಯನ್ನು ಕೇಳಿದ. ರಾಜಾರಾಮು ಅವನಿಗೆ ಸಮಾಧಾನ ಹೇಳಿದ.

"ನೀವು ಕಾಫಿಯನ್ನು ತೆಗೆದುಕೊಂಡಾಯಿತೆ?"

"ಇಲ್ಲ ನೀವು ಬಂದಮೇಲೆಯೇ ತೆಗೆದುಕೊಂಡರಾಯಿತೆಂದು ಸುಮ್ಮನಿದ್ದೇನೆ." ಸುಬ್ರಹ್ಮಣ್ಯನಿಂದಲೇ ಆರ್ಡರು ಜಾರಿಯಾಯಿತು. ಈಗ ರಾಜಾರಾಮನ ತಿಂಡಿಯ ಧ್ವಂಸ ಕ್ರಿಯೆಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿದ್ದ. ಊಟ ಮಾಡುವಾಗ ಮಾತನಾಡದೆ ಊಟ ಮಾಡಬೇಕೆಂಬ ಹಿರಿಯರ ಗಾದೆಯನ್ನು ತಪ್ಪದೆ ಚಾಲನೆಯಲ್ಲಿ ತರುತ್ತಿದ್ದ. "ಮಿ. ರಾಜಾರಾಮ ಹೊಸ ಸುದ್ದಿಯೇನಾದರೂ ದೊರಕಿತೆ?"

"ಒಂದು ಸುದ್ದಿ ದೊರಕಿತು ನೋಡಿ. ಈ ಕೊಲೆಯು ಅತ್ಯಂತ ನಿಗೂಢವಾಗಿದೆಯಂತೆ. ದಿನದಿನಕ್ಕೆ ಹೊಸ ಸಮಸ್ಯೆಗಳು ರೂಪ ತಾಳುತ್ತಿವೆಯಂತೆ. ಪೋಲೀಸಿನವರು ಯಾವದು ಬಗೆಹರಿಯದೆ ತಲೆ ತುರಿಸಿಕೊಳ್ಳುತ್ತಿದ್ದಾರೆ. ಅಶ್ವತ್ಥರಾಯರನ್ನು ಯಾರೋ ಬ್ಲ್ಯಾಕಮೇಲ ಮಾಡುತ್ತಿದ್ದರಂತೆ. ಯಾರೆನ್ನುವದು ಅವರಿಗೆ ಅಸ್ಪಷ್ಟವಾಗಿ ಗೊತ್ತಾಗಿದೆಯೆಂದು ಇನ್ಸಪೆಕ್ಟರರು ಹೇಳುತ್ತಿದ್ದರು"–ಅವನ ಹತ್ತಿರಬಂದು– "ಪೋಲೀಸಿನವರಿಗೆ ಆ ನಾರಾಯಣನ ಮೇಲೆ ಸಂದೇಹ ಬಂದಿದೆಯಂತೆ. ಇದು ಅತಿ ರಹಸ್ಯವಾದ ಸಂಗತಿ ನೋಡಿ. ನೀವು ಯಾರೆದುರಿಗೂ ಇದನ್ನು ಬಾಯಿ ಬಿಡಬಾರದು."

"ಛೆ, ಛೆ ಆ ರೀತಿಯಾಗಿ ನಾನು ಮಾಡುವವನೇ ಅಲ್ಲ. ನನಗೂ ಆ ಕೊಲೆಗೂ ಯಾವ ಸಂಬಂಧ. ಕುತೂಹಲ ತಡೆಯಲಾರದ್ದರಿಂದ ಕೇಳಿದೆ. ಅಷ್ಟೆ."

—ತನ್ನ ಮೇಲೆ ನಂಬಿಕೆಯಿಡಲು ಅಡ್ಡಿಯಿಲ್ಲ ಎಂಬಂತೆ ಸುಬ್ರಹ್ಮಣ್ಯ ನುಡಿದ. ಅವನ ಮಾತು ಕೇಳಿ ರಾಜಾರಾಮನಿಂದ ಮರ್ಮಭೇದಕವಾದ ನಗೆಯೊಂದು ಹೊರಬಂದಿತ್ತು. ಗೆಳೆಯರಿಬ್ಬರೂ ಹೊರಬಂದರು ರಾಜಾರಾಮ ಅವನೆದುರಿಗೆ ಆಫೀಸಿಗೆ ಹೋಗುವದಾಗಿ ಹೇಳಿ ಅವನಿಗೆ ತಿಳಿಯದಂತೆ ಅವನ ಬೆನ್ನು ಹತ್ತಿದ. ಸುಬ್ರಹ್ಮಣ್ಯ ಆಚೀಚೆ ನೋಡದೆ ಭರದಿಂದ ಸಾಗಿದ್ದ. ನಡುವೆ ಅಲ್ಲಲ್ಲಿ ನಿಂತು ಅನೇಕ ಜನರೊಡನೆ ಮಾತನಾಡಿ ಮುಂದೆ ಸಾಗುತ್ತಿದ್ದ. ಒಂದೆರಡು ಮೈಲು ಕ್ರಮಿಸಿದ ಮೇಲೆ ಸುಬ್ರಹ್ಮಣ್ಯ ತನ್ನ ಮನೆಯನ್ನು ಹೊಕ್ಕ. ಸಾಧಾರಣವಾದ

ಮನೆಯದು. ಶ್ರೀಮಂತರದು ಅಲ್ಲ, ಬಡವರದು ಅಲ್ಲ. ನಾಲ್ಕೈದು ಜನ ಹಾಯಾಗಿ ಇರಬಹುದಾಗಿತ್ತು. ಆ ಮನೆಯಲ್ಲಿ ಸುಬ್ರಹ್ಮಣ್ಯ ಒಳಗೆ ಹೋದಮೇಲೆ ಇವನು ದೂರದಲ್ಲಿ ಅವನು ಹೊರಬೀಳುವನೇನೋ ಎಂದು ಕಾಯ್ದುಕೊಂಡಿದ್ದ. ಆದರೆ ಒಂದೆರಡು ತಾಸು ಕಳೆದಮೇಲೆಯೂ ಯಾರೂ ಬರದೆ ಇದ್ದುದರಿಂದ ರಾಜಾರಾಮನಿಗೆ ಬೇಸರ ಇಮ್ಮಡಿಯಾ ಯಿತು. ಆದರೆ ಆ ಮನೆಯಿಂದ ಸ್ತ್ರೀಯೊಬ್ಬಳು ಹೊರಬಿದ್ದಳು. ರಾಜಾ ರಾಮ ಅವಳನ್ನೇ ಹಿಂಬಾಲಿಸಿದ. ಅವಳಿಗೆ ಸಂಶಯ ಬಾರದಂತೆ ಅಲ್ಲಲ್ಲಿ ನಿಂತು ಹೋಗುತ್ತಿದ್ದ. ಆದರವಳು ಹಿಂದಿರುಗಿ ನೋಡದೆ ಮುಂದುವರೆ ಯುತ್ತಿದ್ದಳು. ಕಡೆಗವಳು ಒಂದು ವಿಶಾಲವಾದ ಬಂಗಲೆಯನ್ನು ಪ್ರವೇ ಶಿಸಿದಳು. ರಾಜಾರಾಮ ಅಲ್ಲಿಗೆ ಬಂದು ನಿಂತ. ಅದು ಅಶ್ವತ್ಥರಾಯರ ಮನೆಯೆಂದು ತಿಳಿದು ಅವನಿಗಾದ ಆಚ್ಚರಿ ಅಷ್ಟಿಷ್ಟಲ್ಲ.

ವೀಣಳಿಗಾದ ಇರುಳ ಅನುಭವವನ್ನು ಅಧಿಕಾರಿಗಳಿಬ್ಬರೂ ಪೋಲೀಸ ಸ್ಟೇಶನ್ನಿನಲ್ಲಿ ಚರ್ಚಿಸುತ್ತ ಕುಳಿತಿದ್ದರು. ಶ್ರೀಧರ ಹೇಳುವ ದಾದಮೇಲೆ ಜೋಸೆಫರು ಕೇಳಿದರು—"ಆ ವ್ಯಕ್ತಿ ಯಾರೆಂದು ನಿಮ್ಮ ಕಲ್ಪನೆ.''

''ಆ ನಾಲ್ವರು ಸೋದರರಲ್ಲಿ ಒಬ್ಬರು. ನಡೆವ ವಿಷಯಗಳನ್ನು ಗುಪ್ತವಾಗಿಡುತ್ತಿದ್ದಾರವರು."

''ನಾರಾಯಣ ಎಚ್ಚರಿರುವಾಗೀ ಶಬ್ದವನ್ನು ಕೇಳಲಿಲ್ಲ. ಆದರೆ ಅವಳು ಕೇಳಿದಳು. ಶೇಖರನಿಗೆ ಬರೆದ ಪತ್ರದ ವಿಷಯವಾಗಿ ತನಗೇನು ತಿಳಿಯದೆಂದಳು. ಅವಳ ಮೇಲೆಯೇ ನನಗೆ ಸಂಶಯ ಬರುತ್ತಿದೆ.''

— ಜೋಸೆಫರು ವೀಣಳನ್ನೇ ಸಂದೇಹಕ್ಕೆ ಗುರಿ ಮಾಡಿ ನುಡಿದರು.

''ಜೋಸೆಫ ನಾರಾಯಣ ಮಲಗಿದಮೇಲೆಯೇ ಈ ಸಂಗತಿ ನಡೆ ದಿದೆ. ನಾನು ತೋಟದಲ್ಲೆಲ್ಲಾ ನೋಡಿದೆ. ಆದರೆ ಯಾವ ಕುರುಹು ದೊರೆಯಲಿಲ್ಲ. ವಿಚಿತ್ರವಾಗಿದೆ ಇರಲಿ. ನಾನೀಗ ಅಶ್ವತ್ಥರಾಯರು ಹಣವಿಟ್ಟ ಬ್ಯಾಂಕಿಗೆ ಹೋಗಿಬರುವೆ. ಅದು ಮಹತ್ವದ ಸಂಗತಿ."

ಶ್ರೀಧರನ ಕಾರು ಭವ್ಯವಾದ ಬ್ಯಾಂಕಿನ ಎದುರಿಗೆ ನಿಂತಿತು. ಕರೆಯಕಲ್ಲಿನಿಂದ ಕಟ್ಟಡ ನೋಡಲು ಅದ್ಭುತವಾಗಿತ್ತು. ಮೇಲೊಂದು

ಟಾವರ ಕ್ಲಾಕ ಊರವರಿಗೆ ವೇಳೆಯನ್ನು ತೋರಿಸುತ್ತಿತ್ತು. ಬ್ಯಾಂಕಿನಲ್ಲಿ ಯಾವಾಗಲೂ ಗದ್ದಲ. ಶ್ರೀಧರ ನೇರವಾಗಿ ಮ್ಯಾನೇಜರರ ಹತ್ತಿರ ತೆರಳಿದ. ಮ್ಯಾನೇಜರರು ಯಾರೊಡನೆಯೋ ಮಾತನಾಡುತ್ತಿದ್ದರು. ಇವನು ಬಂದುದನ್ನು ಕಂಡು ಎದುರಿನಲ್ಲಿಯ ಒಂದು ಚೇರನ್ನು ತೋರಿಸುತ್ತ ''ಬನ್ನಿ ಬನ್ನಿ ಇನಸ್ಪೆಕ್ಟರ ನಿಮ್ಮ ಬರುವಿಕೆ ಈಗ ತಾನೆ ಫೋನಿನಿಂದ ತಿಳಿಯಿತು'' ಎಂದರು. ಬಂದವರೊಡನೆ ಐದುನಿಮಿಷ ಮಾತನಾಡಿ ಅವರು ತೆರಳಿದಮೇಲೆ ಅಲ್ಲಿಯೇ ಇದ್ದ ಆಳಿಗೆ ''ನರಸಿಂಗರಾಯರಿಗೆ ಆ ಅಶ್ವತ್ಥರಾಯರ ಅಕೌಂಟನ್ನು ತೆಗೆದುಕೊಂಡು ಬಾ ಎಂದು ಹೇಳು'' ಎಂದು ಆಜ್ಞಾಪಿಸಿ ಶ್ರೀಧರನೆಡೆಗೆ ತಿರುಗಿದರು. ''ಎಲ್ಲಿಗೆ ಬಂದಿದೆ ನಿಮ್ಮ ಪತ್ತೇದಾರಿ?"

''ಈಗೀಗ ಅಂತ್ಯಕ್ಕೆ ಬರುತ್ತಲಿದೆ. ಅಂತ್ಯಕ್ಕೆ ಬಂದಂತೆ ನಿಗೂಢವಾಗುತ್ತ ಸಾಗಿದೆ. ಯಾವದನ್ನು ಒಮ್ಮೆಲೆ ಊಹಿಸಲು ಸಾಧ್ಯವಿಲ್ಲ. ಇಂದಿದ್ದ ಘಟನೆ ನಾಳಿಗಿರುವದಿಲ್ಲ. ದಿನ ದಿನಕ್ಕೆ ಹೊಸ ಸಮಸ್ಯೆಗಳು ಉದ್ಭವಿಸುತ್ತಿವೆ.''

''ನಿಮ್ಮ ಕೆಲಸವೆಂದರೆ ಕಷ್ಟದ ಕೆಲಸ. ಹಗಲು ರಾತ್ರಿಯೆನ್ನದೆ ದುಡಿಯಬೇಕಾಗುತ್ತದೆ.

ಕ್ಲಾರ್ಕು ಅಶ್ವತ್ಥರಾಯರ ಫೈಲನ್ನು ತಂದುಕೊಟ್ಟ. ಶ್ರೀಧರ ಪುಟಗಳನ್ನು ತಿರುಗಿಸಿ ನೋಡಲಾರಂಭಿಸಿದ. ಅಶ್ವತ್ಥರಾಯರ ಕ್ಯಾಶು ಬ್ಯಾಂಕಿನಲ್ಲಿ ಬಹಳಿತ್ತು. ವ್ಯಕ್ತಿ ಕಡು ಜಿಪುಣನಿದ್ದ. ಮೊದಮೊದಲು ಹಣವನ್ನು ತೆಗೆಯಿಸಿರಲೇ ಇಲ್ಲ. ಆದರೆ ಸುಮಾರು ೮-೯ ವರುಷಗಳಿಂದ ಬ್ಯಾಂಕಿನಿಂದ ಹಣ ತೆಗೆಯಿಸುವದು ಆರಂಭವಾಗಿತ್ತು. ಸಣ್ಣದಾಗಿ ಆರಂಭವಾಗಿ ರಕಮು ಬೆಳೆದು ದೊಡ್ಡದಾಗಿತ್ತು. ೮ ವರುಷಗಳ ಹಿಂದೆ ಅದು ೧ ಲಕ್ಷದವರೆಗೇರಿತ್ತು. ಆದಾದ ಮೇಲೆ ಒಮ್ಮೆಲೆ ಅದು ಕೆಳಗಿಳಿದಿತ್ತು. ೫೫ ಸಾವಿರದ ಮೇರೆಯನ್ನು ಮೀರಿ ಹೋಗಿರಲಿಲ್ಲ. ಒಮ್ಮೆ ಏರುತ್ತ ಹೋಗಿ ಇಳಿಯುತ್ತ ಬಂದಿತ್ತು. ಶ್ರೀಧರ ಅದನ್ನು ನೋಡಿ ವಾಪಸು ಕಳುಹಿದ.

"ಇದರಿಂದ ನಿಮಗೇನಾದರೂ ಸಹಾಯವಾಗಬಹುದೇ ಇನ್ಸಪೆಕ್ಟರ?"

"ಅತ್ಯವಶ್ಯವಾಗಿ ನಿಮ್ಮುಪಕಾರಕ್ಕೆ ನನ್ನ ವಂದನೆಗಳು ಮ್ಯಾನೇಜರ" ಎಂದು ಶ್ರೀಧರ ಅಲ್ಲಿಂದ ತೆರಳಿದ. ೮ ವರುಷಗಳ ಹಿಂದೆ ತೆಗೆಸಿದ ಒಂದು ಲಕ್ಷ ರೂಪಾಯಿಗಳನ್ನು ಅಶ್ವತ್ಥರಾಯ ಏನು ಮಾಡಿರಬಹುದು? ಅದನ್ನೇ ಬ್ಲ್ಯಾಕಮೇಲ ಮಾಡುವವರಿಗೆ ಪೂರೈಸುತ್ತಿದ್ದನೆ? ವಿಚಾರಗಳ ತಾಕಲಾಟ ದಲ್ಲಿ ಶ್ರೀಧರ ಕಾರನ್ನು ಮೆಲ್ಲನೆ ಡ್ರ್ಯಾವ ಮಾಡಿಕೊಂಡು ಬರುತ್ತಿದ್ದ. ದಾರಿಯಲ್ಲಿ ಒಂದು ಕಾರು ನಿಂತಿತ್ತು. ಅದರ ಬಳಿಯಲ್ಲಿಯೇ ಪ್ರಸನ್ನ ಕುಮಾರರು ನಿಂತಿದ್ದರು. ಅವರ ಮೈಮೇಲಿನ ಅರಿವೆಗಳೆಲ್ಲ ಎಣ್ಣೆಯ ಕಲೆಗಳಾಗಿದ್ದವು. ಯಂತ್ರವಿಭಾಗದಲ್ಲಿ ಏನೋ ಹೆಚ್ಚುಕಡಿಮೆಯಾಗಿ ಕಾರು ಕೆಟ್ಟಿತ್ತು. ಶ್ರೀಧರ ಅದನ್ನು ನೋಡಿ ನಿಂತುಕೊಂಡ.

''ಏನು ಮಿ. ಪ್ರಸನ್ನಕುಮಾರ ಕಾರಿನ ರಿಪೇರಿ ನಡೆದಿದೆಯಲ್ಲ.''

''ಹಲೋ ಇನ್ಸಪೆಕ್ಟರ ಎಲ್ಲಿಯೋ ಸ್ವಲ್ಪ ಮಿಸ್ಟೇಕ ಕಂಡುಬರು ತ್ತಿದೆ. ಅದನ್ನೇ ನೋಡುತ್ತಿದ್ದೇನೆ."

''ಬೇರೆ ಕಾರಿನಿಂದ ತೆರಳಬೇಕಾಗಿತ್ತು. ಅರಿವೆ ನೋಡಿ ಹೊಲ ಸಾಗಿದೆ."

''ಇನ್ಸಪೆಕ್ಟರ ಯಂತ್ರಗಳನ್ನು ಸರಿಪಡಿಸುವದೆಂದರೆ ನನಗೆ ಬಹಳ ಆಸ್ಥೆ. ನಾನು ಇಂಜಿನಿಯರನಾಗಬೇಕಾಗಿತ್ತು. ಆದರೆ ತಪ್ಪಿ ವಕೀಲ ನಾಗಿದ್ದೇನೆ."

—ಮುಗುಳ್ನಗೆಯೊಡನೆ ತಮ್ಮ ಕಾರ್ಯವನ್ನು ಮುಂದುವರೆಸಿದರು.

ಶ್ರೀಧರ ಪೋಲೀಸ ಸ್ಟೇಶನ್ನಿಗೆ ಬಂದಾಗ ಶೇಖರ ಕುಳಿತಿದ್ದ.

''ಇನ್ಸಪೆಕ್ಟರ ಮತ್ತೆ ನಿಮಗೆ ಬಂದು ತೊಂದರೆಯನ್ನು ಕೊಡ ಬೇಕಾಯಿತು."

''ತೊಂದರೆಯ ಮಾತನ್ನೇ ಮರೆತುಬಿಡಿ ಶೇಖರ. ಪ್ರತಿಯೊಂದ ರಿಂದಲೂ ಸಹಾಯವಾಗುವ ಸ್ಥಿತಿಯಿದು."

''ಅಂದು ನಿಮಗೆ ಒಂದು ಪತ್ರವನ್ನು ತಂದು ತೋರಿಸಿರಲಿಲ್ಲವೇ? ಅದಾದಮೇಲೆ ಯಾವ ಘಟನೆಯು ನಡೆದಿರಲಿಲ್ಲ. ವೀಣಳಿಗೆ ಬುದ್ಧಿ

ಬಂದಿತೆಂದು ತಿಳಿದುಕೊಂಡಿದ್ದೆ. ಆದರೆ ಪುನಃ ಇಂದು ನನ್ನ ಕೋಣೆಯಲ್ಲಿ ಬಿದ್ದಿತ್ತು ಈ ಪತ್ರ. ಇದಾದರೂ ವೀಣಳೇ ಬರೆದದ್ದು.''

''ಎಲ್ಲಿ ಇಲ್ಲಿ ಕೊಡಿ ಅದನ್ನು" ಶ್ರೀಧರ ಪತ್ರವನ್ನು ಇಸಿದುಕೊಂಡು ಓದತೊಡಗಿದ. ಅವನು ಓದಿದಮೇಲೆ—ಶೇಖರ ಈ ರೀತಿಯಾಗಿ ಪತ್ರ ಮೇಲಿಂದಮೇಲೆ ಬಂದರೆ ಹೇಗೆ? ನಾನೆ ಕೊಲೆ ಮಾಡಿರುವನೆಂದು ಅವಳಿಗೆ ಖಚಿತವಾದಂತಿದೆ. ಇಂಥ ಪತ್ರಗಳನ್ನು ಓದುವಾಗ ನನಗೆ ಎಲ್ಲಿಲ್ಲದ ಸಿಟ್ಟು ಬರುವದು. ಆದರೆ ನೀವು ತಡೆಯುವದರಿಂದ ಯಾವ ವಿಶೇಷ ಘಟನೆಯು ನಡೆಯದಂತೆ ನೋಡಿಕೊಂಡಿದ್ದೇನೆ.''

''ಶೇಖರ ನೀವು ಸಂಯಮರೀತಿಯಿಂದಿರುವದು ಮೇಲು. ವೀಣಾ ಯಾಕೆ ಈ ರೀತಿಯಾಗಿ ಬರೆಯುವಳೆಂದು ನಾನು ಊಹಿಸಲಾರೆ. ಅವಳು ಬರೆದಿರುವಳೋ ಇಲ್ಲವೋ ಎಂದು ಸಂದೇಹ ನನಗೆ?"

''ಸರ್ss, ಏನು ಹಾಗೆಂದರೆ! ನಾನು ಬೇಕೆಂತಲೆ ಬರೆದುಕೊಂಡು ಬರುವೆನೆಂದು ನಿಮ್ಮ ಅಭಿಪ್ರಾಯವೇ?"

''ನಾನೆಲ್ಲಿ ಹಾಗೆಂದು ನಿಮಗೆ ಹೇಳಿದೆನೇನು?''

''ಇದಕ್ಕೂ ಪ್ರತ್ಯಕ್ಷವಾಗಿ ಹೇಳುವದನ್ನು ನಾನು ಕಾಣೆ'' ಎಂದು ನುಡಿಯುತ್ತ ಶೇಖರ ಬಿರುಗಾಳಿಯ ಅಬ್ಬರದಂತೆ ಹೊರಗೆ ಹೋದ. ಅಧಿಕಾರಿ ಅವನು ಆ ರೀತಿ ಹೋಗಿದ್ದು ನೋಡಿ ಕ್ರೂರವಾಗಿ ನಕ್ಕ. ಶ್ರೀಧರ ಅವನು ತೆರಳಿ ಒಂದು ತಾಸಿನವರೆಗೆ ಯಾವ ಯಾವದೋ ಫಾಯಿಲನ್ನು ಕೆದರುತ್ತ ಕುಳಿತುಕೊಂಡಿದ್ದ. ಬಾಗಿಲೆಡೆಗೆ ಆಗಾಗ ನೋಡುತ್ತಿದ್ದ. ಆದರೆ ಯಾರ ಸುಳಿವು ಇರಲಿಲ್ಲ. ಶ್ರೀಧರ ಯಾವದೋ ಫಾಯಿಲನ್ನು ಓದುವದರಲ್ಲಿ ತಲ್ಲೀನನಾದಾಗ ಜೋಸೆಫರು ಒಳಗೆ ಪ್ರವೇಶ ಮಾಡಿದರು. ಅವರನ್ನು ನೋಡಿ—

''ಹಲೋ ಜೋಸೆಫ ನಿಮ್ಮ ಕೆಲಸ ಯಶಸ್ವಿಯಾಯಿತೆ?''

''ಯಶಸ್ವಿಯಾಗದೆ ಏನು ಸರ್! ನನಗೆ ದೃಢವಿಶ್ವಾಸವಿತ್ತು. ಆ ವಿಷಯದಲ್ಲಿ."

''ನೀವು ಹೋದಾಗ ಅವನಲ್ಲಿರಲಿಲ್ಲವೆಂದು ಕಾಣುತ್ತದೆ.''

''ಇಲ್ಲ ನಮ್ಮ ಸಿ. ಆಯ್. ಡಿ. ಅವನು ಹೊರಗೆ ಹೋಗಿದ್ದಾನೆಂದು ತಿಳಿದ ಮೇಲೆಯೆ ನಾನಲ್ಲಿಗೆ ಹೋದೆ. ಮನೆಯವರಾರಿಗೂ ಅವನು ಹೊರಗೆ ಹೋಗಿದ್ದಾನೆಂದು ತಿಳಿದಿರಲಿಲ್ಲ. ನಾನೆ ಅವನ ರೂಮಿನಲ್ಲಿ ಕಾಯುತ್ತ ಕೂಡ್ರುವ ನೆವ ಮಾಡಿದೆ. ಬಹಳ ಹೊತ್ತು ಹುಡುಕಿದೆ. ಮೊದಲು ದೊರೆಯಲಿಲ್ಲ. ಆಗ ನೀವು ಹೇಳಿದ್ದೆ ಸತ್ಯವೆಂದು ತಿಳಿದಿದ್ದೆ. ಆದರೆ ಅದನ್ನು ಬಹಳ ಗುಪ್ತವಾದ ಸ್ಥಳದಲ್ಲಿ ಮುಚ್ಚಿಟ್ಟಿದ್ದ.''

"ನೀವು ಹುಡುಕುವಾಗ ನಿಮ್ಮನ್ನು ಯಾರಾದರೂ ನೋಡಿದರೇನು?"

''ಯಾರೂ ಇಲ್ಲವೆಂದೆ ನನ್ನ ಭಾವನೆ. ಆದರೆ ಬಾಗಿಲ ಹತ್ತಿರ ಆಗೀಗ ನೆರಳು ಬೀಳುತ್ತಿತ್ತು. ಅದು ಬಹುಶಃ ನನ್ನ ಭ್ರಮೆ ಇರಬಹುದು."

''ನೆರಳನ್ನು ನೀವು ಹಿಂಬಾಲಿಸಿ ನೋಡಲಿಲ್ಲವೇ?'' ಶ್ರೀಧರ ಆತುರತೆಯಿಂದ ಕೇಳಿದ.

''ನೋಡಿದೆ. ನಾನು ಅವನ ರೂಮನ್ನು ಪರೀಕ್ಷಿಸುವಾಗ ಬಾಗಿಲೆಡೆಯಲ್ಲಿ ಏನೋ ಅಲ್ಲಾಡುತ್ತಿರುವಂತೆ ಕಂಡಿತು. ಅದು ಛಾಯೆ. ಮನುಷ್ಯರದೆಂದೇ ಖಚಿತವಾಗಿ ಹೇಳಲಾರೆ. ಅದು ಕಂಡಾಕ್ಷಣ ನಾನು ಹೊರಗೆ ಹೋಗಿ ನೋಡಿದೆ. ಯಾರೂ ಇರಲಿಲ್ಲ. ನನ್ನಷ್ಟಕ್ಕೆ ನಾನು ನಕ್ಕು ಒಳಗೆ ಬಂದೆ. ಇದೆ ರೀತಿ ನೆರಳು ಕಂಡಾಕ್ಷಣ ಹೊರಗೆ ಹೋಗಿ ವಿಫಲನಾಗುತ್ತಿದ್ದೆ. ಒಬ್ಬರಾದರೂ ನನ್ನ ಕಣ್ಣಿಗೆ ಬೀಳಲಿಲ್ಲ. ಇದೆ ನೋಡಿ ಹರಿತವಾದ ಆಯುಧ."—ಜೋಸೆಫ ಒಂದು ಹರಿತವಾದ ಕತ್ತಿಯನ್ನು ತೆಗೆದು ತೋರಿಸಿದರು. ಶ್ರೀಧರ ಅದನ್ನು ವಿಸ್ಮಿತ ನೇತ್ರಗಳಿಂದೀಕ್ಷಿಸಿದ.

''ಜೋಸೆಫ ಆ ನೆರಳಿನ ವ್ಯಕ್ತಿಯಾರೆಂದು ಬಲ್ಲೆ ನಾನು."

''ಸರ್ ಏನು?" ಜೋಸೆಫರು ಅಚ್ಚರಿಯಿಂದ ಕೇಳಿದರು.

''ನಿಜವಾಗಿ ಜೋಸೆಫ. ನಿಮ್ಮ ಚಲನವಲನಗಳನ್ನು ನೋಡುತ್ತಿದ್ದ ವ್ಯಕ್ತಿ ಯಾರೆಂದು ತಿಳಿದಿದೆ ಈ ವ್ಯಕ್ತಿಯಮೇಲೆ ನನಗೆ ಎಷ್ಟೋ ದಿನದಿಂದ ಸಂಶಯವಿತ್ತು."

''ಯಾರವರು?'' ಜೋಸೆಫರು ಆತುರತೆಯಿಂದ ಕೇಳಿದರು.

''ಆ ವ್ಯಕ್ತಿಯ ಹೆಸರು ಕೇಳಿದರೆ ನೀವು ಮತ್ತಷ್ಟು ವಿಸ್ಮಿತರಾಗ

ಬಹುದು.'' ಎನ್ನುತ್ತ ಶ್ರೀಧರ ಪೆನ್ನನ್ನು ತೆಗೆದುಕೊಂಡು ಅಲ್ಲಿಯೇ ಇದ್ದ ಒಂದು ತುಂಡು ಪೇಪರಿನಮೇಲೆ ಆ ವ್ಯಕ್ತಿಯ ಹೆಸರು ಬರೆದು ಅವರೆದುರಿಗೆ ಹಿಡಿದ.

''My God ಇವ....'' ''ಶ್ಶ್ ಶ್ಶ್ ಒದರಬೇಡಿ. ಇದೆ ವ್ಯಕ್ತಿ ನಿಮ್ಮನ್ನು ನೋಡುತ್ತಿದ್ದುದು.'' ಎಂದು ಶ್ರೀಘರ ಆ ಕಾಗದ ತುಂಡನ್ನು ವೇಸ್ಟ ಪೇಪರ ಬಾಸ್ಕೇಟಿನಲ್ಲಿ ಚೆಲ್ಲಿದ.

',ನೋಡಿ ಇನ್ಸಪೆಕ್ಟರ ನಾನು ಎಕ್ಸಪೆಕ್ಟ ಮಾಡಿದಂತೆ ನಡೆಯಿತು. ಅವನೆ ಎಂದು ನಿಮಗೆ ನಾನು ಎಷ್ಟುಸಲ ಸೂಚಿಸಿದರೂ ನೀವು ನನ್ನ ಮಾತನ್ನು ನಂಬುತ್ತಿರಲೇ ಇಲ್ಲ.''

''ನನಗೂ ಮೊದಲು ತಿಳಿದಿರಲೇ ಇಲ್ಲ. ಆದರೂ ಅವನನ್ನೇ ಸಂದೇಹ ಮಾಡುವಾಗ ನನ್ನ ವಿಚಾರ ಸರಣಿ ತಪ್ಪೆನಿಸುತ್ತಿತ್ತು.''

''ಇರಲಿ ಬಿಡಿ. ಅದಕ್ಕೇಕೆ ಅಷ್ಟು ನಾನು ಕಂಡು ಹಿಡಿದರೇನು ನೀವು ಕಂಡುಹಿಡಿದರೇನು?''

—ಜೋಸೆಫ ಒಂದು ಹೆಮ್ಮೆಯ ನಗುವನ್ನು ನಕ್ಕರು. ಶ್ರೀಧರ ಅವರ ನಗುವನ್ನು ನೋಡಿ ತಾನು ನಕ್ಕ. ಆದರೆ ಅದರಲ್ಲಿ ಯಾವದೋ ವೈಶಿಷ್ಟ್ಯಪೂರ್ಣವಾದ ಭಾವ ಹುದುಗಿತ್ತು.

ಫೋನು ಗಂಟೆ ಬಾರಿಸುವದನ್ನು ಕೇಳಿ ಶ್ರೀಧರ ಎದ್ದು ಬಂದು ರಿಸೀವರನ್ನು ಕೈಯಲ್ಲಿ ತೆಗೆದುಕೊಂಡು ''ಯಾರು ಮಾತನಾಡುತ್ತಿರುವವರು?'' ಎಂದ.

''ಇನ್ಸಪೆಕ್ಟರ ನಾನು ನಾರಾಯಣ ಮಾತನಾಡುತ್ತಿರುವವನು. ಇಂದು ನಿಮಗೊಂದು ರಹಸ್ಯವನ್ನು ಹೇಳಬೇಕಾಗಿದೆ. ಅದನ್ನು ಇಂದಿನ ವರೆಗೆ ಹೇಳದೆ ಮುಚ್ಚಿಟ್ಟಿದ್ದೆ.'' ಶ್ರೀಧರನ ಕಿವಿಗಳೆರಡು ನೆಟ್ಟಗಾದವು. ''ನೀವು ಯಾವ ವೇಳೆಗೆ ಇಲ್ಲಿಗೆ ಬರುವಿರಿ. ಅಥವಾ ನಾನೇ ಅಲ್ಲಿಗೆ ಬರಲೇನು?''

''ಬೇಡ ನಾನೇ ಅಲ್ಲಿಗೆ ಇನ್ನೊಂದು ತಾಸಿನೊಳಗಾಗಿ ಬರುವೆ.''

''ಆದಕ್ಕೂ ಬೇಗನೆ ಬರುವದಾಗುವದಿಲ್ಲವೆ?''

"ಇಲ್ಲ. ಕ್ಷಮಿಸಬೇಕು. ಇನ್ನು ಒಂದು ತಾಸಿನಲ್ಲಿ ಎಲ್ಲಿದ್ದರೂ ನಿಮಗೆ ಭೆಟ್ಟಿಯಾಗುವೆ." ಎಂದು ನಾರಾಯಣ ಫೋನು ಡಿಸಕನೆಕ್ಟ ಮಾಡಿದ.

ಶ್ರೀಧರನಿಗೆ ನಾರಾಯಣ ಫೋನು ಮಾಡುವನೆಂದು ತಿಳಿದಿತ್ತು. ನಿನ್ನೆಯಿಂದಲೂ ಅದನ್ನೇ ಕಾಯುತ್ತಿದ್ದ. ಒಮ್ಮೊಮ್ಮೆ ಹಾಗೆ ಕಾಯುವದು ತನ್ನ ಭ್ರಮೆಯೆಂದು ಅವನಿಗನಿಸುತ್ತಿತ್ತು. ನಾರಾಯಣ ತನಗೆ ಫೋನನ್ನು ಮಾಡಿಯೇ ತೀರುತ್ತಾನೆ; ಅದು ನಿಶ್ಚಿತ. ತನಗೆ ತಾನೆ ಸಮಾಧಾನವನ್ನು ಹೇಳಿಕೊಳ್ಳುತ್ತಿದ್ದ. ನಂಬಿಕೆ ಅಪನಂಬಿಕೆಗಳಲ್ಲಿ ಜೇಡನ ಬಲೆಗೆ ಬಿದ್ದು ಜೀವವನ್ನುಳಿಸಿಕೊಳ್ಳಲು ಅವಿರತವಾಗಿ ಹೋರಾಡುವ ಕೀಟಕದಂತೆ ತೊಳಲಾಡುತ್ತಿದ್ದ. ಒಮ್ಮೊಮ್ಮೆ ಟೆಲಿಫೋನಿನ ಗಂಟೆ ಬಾರಿಸಿದಂತಾಗುತ್ತಿತ್ತು. ಮರುಕ್ಷಣವೇ ಅವನು ತನ್ನ ಚಂಚಲ ಮನಸ್ಥಿತಿಯನ್ನು ಕಂಡು ನಗುತ್ತಿದ್ದ. ರಾತ್ರಿ ಮಲಗುವಾಗ ಸಹ ಅಸಮಾಧಾನದಿಂದಲೇ ಮಲಗಿದ್ದ. ಆದರೆ ನಿದ್ದೆಯೆನ್ನುವದು ಅವನ ಪಾಲಿಗೆ ಶೂನ್ಯವಾಗಿತ್ತು. ಯೋಚನೆಗಳ ವಿಪರೀತ ನೋವಿನಿಂದ, ಮೆದುಳಿನ ಅಸ್ವಸ್ಥತೆಯಿಂದ, ಕಣ್ಣು ಉರಿಯುತ್ತಿರುವ ದಾವಾನಲದಂತೆ ಕೆಂಪಗಾಗಿ ಉರಿಯನ್ನು ಕಾರುತ್ತಿದ್ದವು. ಮರುದಿನ ಎದ್ದಾಗ ನಾರಾಯಣನ ಕರೆ ಅವನಿಗಾಗಿ ಕಾದಿತ್ತು. ಒಂದೆ ಓಟಕ್ಕೆ ಫೋನಿನೆಡೆಗೆ ಓಡಿಬಂದಿದ್ದ. ಅದನ್ನು ಕೆಳಗಿಟ್ಟು ಬರುವಾಗ ಸುಪ್ರಸನ್ನತೆಯ ಮಂದ ಹಾಸವೊಂದು ಅವನ ಮೋರೆಯ ಮೇಲೆ ಲಾಸ್ಯವಾಡುತ್ತಿತ್ತು. ವಾಚನ್ನೇ ನೋಡುತ್ತ ನಾರಾಯಣನ ದಾರಿಯನ್ನು ಕಾಯತೊಡಗಿದ. ವೇಳೆ ೫-೧೦-೧೫ ನಿಮಿಷಗಳಂತೆ ನಾಗಾಲೋಟದಿಂದ ಮುಂದೆ ಓಡುತ್ತಿತ್ತು. ಒಂದು ತಾಸಿಗೆ ಬಂದಿತು, ಒಂದು ತಾಸು ಸಹ ಕಳೆಯಿತು. ಶ್ರೀಧರನ ಮೆದುಳು ತಾಳ್ಮೆಯನ್ನು ಕಳೆದುಕೊಂಡು ಅಸಹನೆಯಿಂದ ಸಿಡಿಯುತ್ತಿತ್ತು. ಯಾಕೋ ವಿಲಂಬವಾಗಿರಬೇಕೆಂದು ತನ್ನಷ್ಟಕ್ಕೆ ಸಮಾಧಾನ ಹೇಳಿಕೊಂಡ. ಆದರೆ ಅದು ವಿಧಿಯನ್ನೆದುರಿಸಿ ನಿಂತ ಬಡಜೀವಿಯಂತಿತ್ತು. ಹೊರಗೆ ಬಂದು ಬೀದಿಯಲ್ಲಿ ತನ್ನ ದೃಷ್ಟಿ ನಿಲುಕುವವರೆಗೆ ನೋಡಿದ. ನಾರಾಯಣನ ಮೇಲೆ ಸಿಟ್ಟು ಬಂದಿತು. ಈ ವ್ಯಕ್ತಿಗಳು ಹೇಳಿದಂತೆ ಸರಿಯಾದ ವೇಳೆಗೆ ಕೆಲಸಮಾಡುವದಿಲ್ಲ. ಇನ್ನು ವಿಲಂಬ ಮಾಡುವದು ತರವಲ್ಲವೆಂದು ಶ್ರೀಧರ ಅಶ್ವತ್ಥರಾಯರ ಮನೆಯನ್ನು ತಲುಪಿದ. ಅವನು ಆ ರೀತಿಯಾಗಿ

ಬಂದುದನ್ನು ನೋಡಿ ಮನೆಯವರಿಗೆಲ್ಲ ವಿಪರೀತ ಆಶ್ಚರ್ಯವಾಯಿತು. "ನಾರಾಯಣನೆಲ್ಲಿ?" ಎಂದು ಆತುರದಿಂದ ಕೇಳಿದ.

"ಸುಮಾರು ೧೫ ನಿಮಿಷಗಳ ಹಿಂದೆ ಯಾರ ಜೊತೆಯಲ್ಲಿಯೋ ಫೋನಿನಲ್ಲಿ ಮಾತನಾಡಿದ. ಅಲ್ಲಿಂದ ಹೊರಗೆ ಹೋದ ಎಲ್ಲಿಗೆಂದು ಯಾರಿಗೂ ತಿಳಿಯದು."

"ನಾರಾಯಣನ ನಿನ್ನೆಯ ಸ್ಥಿತಿ ಹೇಗಿತ್ತು?"

"ನಿನ್ನೆ ಅವನಿಗೆ ಮೈಯಲ್ಲಿ ಚೆನ್ನಾಗಿರಲಿಲ್ಲ, ಅವನ ಮೋರೆ ಬಹಳ ವಿವರ್ಣವಾಗಿತ್ತು. ಶೇಖರ ಡಾಕ್ಟರರನ್ನು ಕರೆಯುತ್ತೇನೆಂದು ಹೇಳಿದರೆ ಅದನ್ನು ನಿರಾಕರಿಸಿದ."

"ಹಾಗೋ ಸರಿ." ಎಂದು ಪೋಲೀಸಸ್ಟೇಶನ್ನಿಗೆ ತೆರಳಿದ. ಮನೆಯವರಿಗೆಲ್ಲ ಅವನ ಮಾತು ಒಗಟೆನಂತಾಗಿತ್ತು. ಆ ಇಡೀ ದಿನ ನಾರಾಯಣನ ಸುಳಿವೆ ದೊರೆಯಲಿಲ್ಲ. ಶ್ರೀಧರ ಅವನನ್ನು ಭೆಟ್ಟಿಯಾಗಲು ಚಡಪಡಿಸುತ್ತಿದ್ದ. ಆದರೆ ಅವನ ನಿರೀಕ್ಷೆ ನಿರಾಶೆಯಲ್ಲಿ ಪರ್ಯವಸಾನಗೊಳ್ಳುತ್ತಿತ್ತು. ಜೋಸೆಫರು ಹೇಳಿದಮಾತು ಒಮ್ಮೊಮ್ಮೆ ನೆನಪಿಗೆ ಬರುತ್ತಿತ್ತು. ನಾರಾಯಣ ಎಲ್ಲಿಯಾದರೂ ಫರಾರಿಯಾಗಿರುವನೆ? ಶ್ರೀಧರನ ತಲೆ ಮಾನಸಿಕ ಜಂಜಾಟಗಳ ತವರುಮನೆಯಾಯಿತು. ಜೊಸೆಫರಂತು ಹೆಮ್ಮೆಯಿಂದ ತಮ್ಮ ಫ್ರೆಂಚಕಟ್ಟ ಮೀಸೆಯಮೇಲೆ ಕೈಯಾಡಿಸಿಕೊಂಡು ತಮ್ಮ ಪ್ರಚಂಡ ಊಹಾಬುದ್ಧಿಗಾಗಿ, ಚತುರತೆಗಾಗಿ ತಮಗೆ ತಾವೇ ಆನಂದಪಡುತ್ತಿದ್ದರು. ತಮ್ಮ ಅನುಭವ ಎಂದೂ ತಪ್ಪು ಜಾಡನ್ನು ಹಿಡಿದು ಸಾಗಲಾರದೆಂದು ತಮ್ಮೆದುರಿಗಿರುವ ಪೋಲೀಸರ ಮುಂದೆ ಹೇಳುತ್ತಿದ್ದರು. ತಮ್ಮ ಸರ್ವಿಸ್ಸಿನಲ್ಲಾದ ಅನೇಕ ಹಳೆಯ ಪ್ರಕರಣಗಳನ್ನು ಹೇಳಿ ಆಗ ತಾವು ಹೇಗೆ ಹಗಲಿರುಳೆನ್ನದೆ ದುಡಿದರೆಂಬುದನ್ನು ರಸವತ್ತಾಗಿ ಬಣ್ಣಿಸಿದರು.

ಮಧ್ಯರಾತ್ರಿಯಾಗಿತ್ತು, ಶ್ರೀಧರನಿಗೆ ಅದೆ ತಾನೆ ನಿದ್ದೆ ಹತ್ತಿತ್ತು. ಟೆಲಿಫೋನು ಗಂಟೆ ಒಂದೇಸವನೆ ಬಾರಿಸಿದ್ದನ್ನು ಕಂಡು ಅವನ ನಿದ್ದೆಯು ತುಂಡಾಯಿತು. ಉರಿಯುತ್ತಿರುವ ಕಣ್ಣುಗಳನ್ನು ತಿಕ್ಕಿಕೊಳ್ಳುತ್ತ ರಿಸಿವರನ್ನು ಕೈಯಲ್ಲಿ ಹಿಡಿದು ಆಕಳಿಸಿ, ಯಾರವರು?" ಎಂದು ಆಲಸ್ಯದಿಂದಲೇ ಕೇಳಿದ.

"ನಾನು ಸರ್ ಜೋಸೆಫ. ಪೋಲೀಸ ಸ್ಟೇಶನ್ನಿನಿಂದ ಮಾತನಾಡುತ್ತಿದ್ದೇನೆ. ಈಗ ನಾನು ನೈಟ್ ಡ್ಯೂಟಿಯಮೇಲೆ ಇರುವೆ.

ಇದೆ ಈಗ ಸುದ್ದಿ ಬಂದಿದೆ. ಪೂನಾ ಬೆಂಗಳೂರ ರೇಲ್ವೆಮಾರ್ಗದಲ್ಲಿ ಇಲ್ಲಿಂದ ೧೫ ಮೈಲು ದೂರದಮೇಲೆ ಯಾವನೋ ಒಬ್ಬ ವ್ಯಕ್ತಿ ಆತ್ಮಹತ್ಯೆ ಮಾಡಿಕೊಂಡಿದ್ದಾನಂತೆ."

"ಆತ್ಮಹತ್ಯವೇ ಎಷ್ಟು ಗಂಟೆಗೆ? ವ್ಯಕ್ತಿಯು ತರುಣನೋ ಮುದುಕನೋ?"

"ತರುಣ. ಅವನ ಹೆಸರು ನಾರಾಯಣ. ಇದೆ ಈಗ ಇನಫರ ಮೇಶನ್ ಬಂದಿದೆ."

"ಈಗಲೇ ಪೋಲೀಸ ಸ್ಟೇಶನ್ನಿಗೆ ಬರುವೆ." ೧೦ ನಿಮಿಷಗಳಲ್ಲಿ ಶ್ರೀಧರ ಪೋಲೀಸ ಸ್ಟೇಶನ್ನಿನಲ್ಲಿ ಪ್ರತ್ಯಕ್ಷನಾಗಿದ್ದ. "ಈಗಲೇ ಹೋಗುವಾ ಅಲ್ಲಿಗೆ" ಎಂದ.

"ಇಂಥ ಅಪರಾತ್ರಿಯಲ್ಲಿ! ಈಗ ನೋಡಿ ಗಂಟೆ ಎರಡಾಗಿದೆ. ಮೂರುತಾಸು ಕಳೆದಮೇಲೆ ಅಲ್ಲಿಗೆ ಹೋಗುವದು ನೆಟ್ಟಗೆ. ಎಂಥ ಸ್ಥಳವೋ ಏನೋ? ಇಂಥ ರಾತ್ರಿಯಲ್ಲಿ ಅಲ್ಲಿ ಹೋಗಿ ಮಾಡುವದಾದರೂ ಏನು?" ಇನಸ್ಪೆಕ್ಟರನಿಗೆ ಆ ವಾದಸರಣಿ ಹಿಡಿಸಿತು. ಅಧಿಕಾರಿಗಳಿಬ್ಬರೂ ಕೊಲೆಯ ವಿಷಯವಾಗಿಯೇ ಮಾತನಾಡುತ್ತ ಕುಳಿತರು. ಆಗಸದಲ್ಲಿಯ ನಕ್ಷತ್ರಗಳ ಮಿಂಚುವಿಕೆಯು ಮಂದವಾಗುತ್ತ ನಡೆದಂತೆ ಗಾಳಿಯಲ್ಲಿಯ ಶೀತಲತೆಯ ಅಂಶವು ಇಳಿಯುತ್ತ ನಡೆದಿತ್ತು. ಶ್ರೀಧರ ಬೆಳಗಾಗುವದನ್ನೇ ಮೀನದ ಸುಳಿವಿಗಾಗಿಯೇ ತಪಸ್ವಿಯ ಸೋಗು ಹಾಕಿಕೊಂಡು ಕುಳಿತ ಸಮುದ್ರಪಕ್ಕಿಗಳಂತೆ ಕಾದಿದ್ದ- ಬೆಳಗಾಗುತ್ತಲೆ ಅವರು ನಾಲ್ಕೈದು ಪೋಲೀಸರನ್ನು ಒಬ್ಬ ಮಾರ್ಗದರ್ಶಕನನ್ನು ಕರೆದುಕೊಂಡು ಆತ್ಮಹತ್ಯೆಯು ನಡೆದ ಸ್ಥಳಕ್ಕೆ ಬಂದರು. ಆ ಸ್ಥಳದಲ್ಲಿ ಮೂರು ನಾಲ್ಕು ರೇಲ್ವೆಯ ನೌಕರರು ನಿಂತಿದ್ದರು. ಹಳಿಯ ಸುತ್ತುಮುತ್ತಲೂ ಏಳೆಂಟು ದೊಡ್ಡ ಗಿಡಗಳಿದ್ದವು. ಹಳಿಗೆಲ್ಲಾ ತೊಗಲು ಮಾಂಸದ ತುಣುಕುಗಳು ಅಂಟಿಕೊಂಡಿದ್ದವು. ಸಿಕ್ಕಿಕೊಂಡವನ ದೇಹ ತುಂಡು ತುಂಡಾಗಿತ್ತು. ಕೈಕಾಲುಗಳೆಲ್ಲ ಸಿಡಿದಿದ್ದವಲ್ಲದೆ ಬೆರಳುಗಳು ಸಹ ಬೇರೆಬೇರೆಯಾಗಿದ್ದವು. ರುಂಡವಂತು ಪತ್ತೆ ಹತ್ತಲಾರದಷ್ಟು ವಿಕಾರವಾಗಿತ್ತು. ರೇಲ್ವೆಯ ಒಬ್ಬ ಸರ್ವಂಟ ಅದನ್ನು ಹೊಂದಿಸುತ್ತಿದ್ದ,

"ಈ ಮೇಲೆ ಗಿಡವಿದೆಯಲ್ಲಾ ಇಲ್ಲಿಂದಲೇ ಜಿಗಿದನಂತೆ ಈಯಪ್ಪ." ಎಂದು ಪೋರ್ಟರ ತನ್ನನ್ನು ವಿಚಾರಿಸುತ್ತಿದ್ದ ಒಬ್ಬನಿಗೆ ಸಂಗತಿಯನ್ನು

ವಿಶದವಾಗಿ ತಿಳಿಸುತ್ತಿದ್ದ. ಶ್ರೀಧರನಿಗೆ ಕುತೂಹಲವಾಯಿತು, ಅವನನ್ನು ಕರೆದು ವಿಚಾರಿಸಿದ. "ನಿನ್ನೆ ದಿನ ಸಂಜೆ ೭ ಗಂಟೆಯ ಸುಮಾರಿಗೆ ಟ್ರೇನು ಜೋರಿನಿಂದ ಬರುವಾಗ ಇವನು ಮೇಲಿನಿಂದ ದೊಪ್ಪನೆ ಹಾರಿದ ನಂತೆ. ಡ್ರೈವರ ಏನೆಂದು ತಿಳಿಯುವ ಮೊದಲೇ ಈ ಘಟನೆ ನಡೆದು ಹೋಗಿತ್ತು."

"ಸುತ್ತುಮುತ್ತಲೆಲ್ಲಾ ಹುಡುಕಿದಿರಾ ನೀವು?'

"ಒಂದಿಬ್ಬರು ನಾವು ನಿನ್ನೆಯಿಂದ ಇಲ್ಲಿಯೇ ಇದ್ದೇವೆ. ಆಗೋ ಅಲ್ಲಿ ಒಂದು ಕಲ್ಲು ಕಾಣುವದು ನೋಡಿ ಅಲ್ಲಿಯೇ ಇವನು ಒಂದು ಕೋಟ ನ್ನಿಟ್ಟಿದ್ದ. ಜೇಬಿನಲ್ಲೇನೋ ಕಾಗದಗಳಿದ್ದವು."

"ಆ ಕೋಟೆಲ್ಲಿದೆ ಈಗ?"

"ನನ್ನ ಸಂಗಡಿಗನು ಅದನ್ನು ಸ್ಟೇಶನ್ನ ಮಾಸ್ತರರಿಗೆ ಕೊಡಲು ತೆರಳಿದ್ದಾನೆ."

ಶ್ರೀಧರ ರಭಸದಿಂದ ರೇಲ್ವೆ ಸ್ಟೇಶನ್ನಿಗೆ ಸಾಗಿದ. ಇವನನ್ನು ನೋಡಿ ಸ್ಟೇಶನ್ ಮಾಸ್ತರರು—

"ಇನ್ಸಪೆಕ್ಟರ ನಾನೇ ನಿಮಗೆ ಹೇಳಿ ಕಳುಹಿಸುವವನಿದ್ದೆ. ನೀವು ಬಂದದ್ದು ನೆಟ್ಟಗಾಯಿತು." ಎಂದು ಅವನಿಗೆ ಆ ಕೋಟನ್ನು ಒಪ್ಪಿ ಸಿದರು. ಅದರಲ್ಲಿ ಅನೇಕ ನಿರುಪಯುಕ್ತವಾದ ಹಾಳೆಗಳಿದ್ದವು. ಅವು ಗಳಲ್ಲಿ ಮೂರು-ನಾಲ್ಕು ಟೈಪು ಮಾಡಿದ ಕಾಗದಗಳನ್ನು ಪಿನ್ನಿನಿಂದ ಚುಚ್ಚಲಾಗಿತ್ತು. ಶ್ರೀಧರ ಅದರಲ್ಲಿ ತನ್ನ ಹೆಸರನ್ನು ನೋಡಿ ವಿಸ್ಮಯ ದಿಂದ ಅದನ್ನು ಓದಿದ.

ಇನ್ಸಪೆಕ್ಟರ ಶ್ರೀಧರವರಿಗೆ—

ಮೊನ್ನೆ ನಿಮಗೆ ಫೋನು ಮಾಡಿದಂತೆ ಭೆಟ್ಟಿಯಾಗಬೇಕೆಂದು ಮಾಡಿದ್ದೆ. ಒಂದು ರಹಸ್ಯ ಸಂಗತಿಯನ್ನು ನಿವೇದಿಸುವವನಿದ್ದೆ. ಆದರೆ ನಿಮ್ಮನ್ನು ಭೆಟ್ಟಿಯಾಗಿ ಎಲ್ಲವನ್ನು ಹೇಳುವ ಧೈರ್ಯ ನನಗಿರಲಿಲ್ಲ. ನಿಮ್ಮೆಲ್ಲರ ಕುತೂಹಲಕ್ಕೆ ಪಾತ್ರನಾದ ಕೊಲೆಗಾರ ನಾನೆಯೆಂದರೆ ನಿಮಗೆ ಆಶ್ಚರ್ಯ ವಾಗಬಹುದು. ಈ ಕೊಲೆಯನ್ನು ಮಾಡುವ ಉದ್ದೇಶ ನನಗಿರಲಿಲ್ಲ ವಾದರೂ ಪರಿಸ್ಥಿತಿ ಆ ರೀತಿಯಾಗಿ ಪ್ರೇರೇಪಿಸಿತು. ದ್ವೇಷ ಒಬ್ಬನ ಮನಸ್ಸಿನಲ್ಲಿ ಕ್ರೂರನೃತ್ಯಗೈಯುತ್ತಿರುವಾಗ ಅಲ್ಪನಾದ ವ್ಯಕ್ತಿ ಅದನ್ನು ಹತೋಟಿಯಲ್ಲಿಟ್ಟುಕೊಳ್ಳುವದು ಸಾಧ್ಯವೆ? ಇನ್ನು ಸ್ವಲ್ಪ ದಿನಗಳಲ್ಲಿ

ನಾನು ಸಿಕ್ಕಿಬೀಳುವೆನೆಂದು ನನಗೆ ಖಚಿತವಾಯಿತು ತಂದೆಯ ಹಂತಕನೆಂದು ಕ್ರೋಧಿಸಬುವೆಂದು ಸಮಾಜ ಭರ್ತ್ಸನೆ ಮಾಡುವಾಗ ನಾನು ಜೀವಿಕೊಂಡಿರುವದು ಸಾಧ್ಯವಿರಲಿಲ್ಲ.

ನನ್ನ ತಂದೆಯನ್ನು ನಾನು ಮೊದಲಿನಿಂದಲೂ ದ್ವೇಷಿಸುತ್ತಿದ್ದೆ. ಅದಕ್ಕೆ ಕಾರಣ ನಮ್ಮನ್ನು ಮಕ್ಕಳೆಂದು ತಿಳಿಯದೆ ಹಡೆದ ತಪ್ಪಿಗಾಗಿ ಹೊಟ್ಟೆಗೆ ಹಾಕುವಂತೆ ನಮ್ಮ ತಂದೆ ಹಾಕುತ್ತಿದ್ದ. ತಂದೆಯಲ್ಲಿರಬೇಕಾದ ಮೋಹ, ಮಮತೆ, ಮಕ್ಕಳ ಅಭ್ಯುದಯದ ಗುಣಗಳು ಅವನಲ್ಲಿ ಲುಪ್ತವಾಗಿದ್ದವು ಅದೊಂದು ಧನಪಿಶಾಚಿ ಧನಕ್ಕಾಗಿ ಯಾವದನ್ನು ಮಾಡಲು ಹೇಸಲಾರದ ವ್ಯಕ್ತಿ. ತಾರುಣ್ಯದಲ್ಲಿದ್ದಾಗ ಇದೆ ಕಾರಣಕ್ಕಾಗಿ ಅನೇಕರ ಗೋಣು ಮುರಿದಿದ್ದಾರೆ. ನನಗೆ ತಿಳುವಳಿಕೆ ಬಂದಂತೆ ನಮ್ಮಲ್ಲಿ ಮಾತ್ಸರ್ಯದ ಕಿಡಿ ಹೊತ್ತಿ ಉರಿಯಲಾರಂಭಿಸಿತ್ತು. ನಮ್ಮ ತಾಯಿಯನ್ನು ಅವನು ಚಿತ್ರಹಿಂಸೆಪಡಿಸುವದನ್ನು ನೋಡಿಯಂತೂ ನಮಗಾರಿಗೂ ಸಹ್ಯವಾಗುತ್ತಿರಲಿಲ್ಲ. ಈ ಪುರುಷಾಮೃಗ ತಂದೆಯಿರುವದಕ್ಕಿಂತ ಸತ್ತುಹೋಗುವದೇ ಮೇಲೆಂದು ನಮ್ಮ ಅಣ್ಣ ತಮ್ಮಂದಿರಿಗೆನಿಸಿದ್ದರೆ ಅದರಲ್ಲಿ ಯಾವ ಆಶ್ಚರ್ಯವು ಇಲ್ಲ. ನಾನು ಮೊನ್ನೆಯವರೆಗೆ ಇದೇ ಸಂದರ್ಭಕ್ಕಾಗಿ ಕಾದು ಕುಳಿತಿದ್ದೆ. ಮನೆಯಲ್ಲಾರೂ ಇರದಂತೆ ವ್ಯವಸ್ಥೆ ಮಾಡಿದ್ದೆ. ತಂದೆಯ ಮನೆಯನ್ನು ಬಿಟ್ಟು ಹೋಗುವ ವಿಚಾರ ನನ್ನಲ್ಲಿತ್ತು. ಹೋಗುವದಾದರೆ ಈ ಮುದುಕನಿಗೆ ಚೆನ್ನಾಗಿ ಎಚ್ಚರಿಕೆಯನ್ನು ಕೊಟ್ಟು ಹೋಗಬೇಕೆಂದು ಅವನ ರೂಮಿಗೆ ತೆರಳಿ ನನ್ನ ಮನಸೋಕ್ತವಾಗಿ ಅಂದೆ. ಅವನು ನನಗೆ ಏನೇನೋ ಅಂದ. ಮಾತಿಗೆ ಮಾತು ಬೆಳೆದು ವಿಕೋಪಕ್ಕೆ ಹೋಯಿತು. ನನ್ನಲ್ಲಿಯ ವಿವೇಕ ಬುದ್ಧಿಯನ್ನು ಕ್ರೋಧ ಮತ್ತು ದ್ವೇಷ ಜ್ವಾಲೆಗಳು ಸುಟ್ಟುಹಾಕಿದ್ದವು. ಎದುರಿಗಿರುವವನು ಮಾನವನೆಂಬುದು ಅಳಿಸಿ ಯಾವದೋ ಒಂದು ಕ್ರೂರ ಪ್ರಾಣಿಯೆಂದೆನಿಸಿದ್ದರಿಂದ ಹತ್ತಿರವಿರುವದನ್ನು ತೆಗೆದುಕೊಂಡು ಅವನ ಮೇಲೆ ಕಸುವಿನಿಂದ ಅಪ್ಪಳಿಸಿದೆ. ಅವನು ಮಾತನಾಡದೆ ಭೂಮಿಯಮೇಲೊರಗಿದ್ದ. ಸ್ವಲ್ಪ ಹೊತ್ತಿನಮೇಲೆ ನನಗೆ ಪ್ರಜ್ಞೆಬಂದು ವಾಸ್ತವಿಕ ಸ್ಥಿತಿಯ ಅರಿವಾಗಿ ಭಯದಿಂದ ಕಂಪಿಸಿದೆ. ನನ್ನನ್ನು ಯಾರೂ ನೋಡಿಲ್ಲವೆಂಬುದು ನನಗೆ ಚೆನ್ನಾಗಿ ತಿಳಿದಿತ್ತು. ಆ ಹರಿತವಾದ ಕತ್ತಿಯಮೇಲೆ ನನ್ನ ಕೈಬೆರಳ ಗುರುತುಗಳಿದ್ದವು. ರಕ್ತವು ನನ್ನಮೇಲೆ ಸ್ವಲ್ಪವಾದರೂ ಸಿಡಿಯದಂತೆ ಕರವಸ್ತ್ರದಿಂದ ಆ ಕತ್ತಿಯನ್ನು

ಜಾಗರೂಕನಾಗಿ ಕಿತ್ತಿದೆ. ಆ ಕತ್ತಿಯನ್ನು ನನ್ನ ರೂಮಿನಲ್ಲಿ ಬಚ್ಚಿಟ್ಟೆ. ಆ ಮೇಲೆ ಪಿಕ್ಚರು ನೋಡಲು ತೆರಳಿದೆ. ಆದರೆ ಅದೆಲ್ಲ ವಿಪರೀತವಾಗಿತ್ತು. ನಾನು ಹೆಚ್ಚುದಿನ ನಿರಪರಾಧಿಯಾಗಿರಲು ಸಾಧ್ಯವಿರದ್ದರಿಂದ ಆತ್ಮಹತ್ಯೆ ಮಾಡಿಕೊಳ್ಳಬೇಕಾಯಿತು.

—ಇತಿ ದುರ್ದೈವಿ ನಾರಾಯಣ.

ಶ್ರೀಧರ ಅದನ್ನು ರೆಪ್ಪೆ ಬಡೆಯದಲೆ ಓದಿದ. ಅದನ್ನು ಮುಗಿಸಿ ವಿಷಾದದ ನಿಟ್ಟುಸಿರನ್ನು ಹೊರಚೆಲ್ಲಿದ. ಜೋಸೆಫರು ಅದನ್ನು ಓದಿ ಮುಗಿಸಿದಾಗ ಅವರ ಮೋರೆ ಹುಣ್ಣಿಮೆಯ ಚಂದ್ರನಂತೆ ಹಿರಿದಾಗಿತ್ತು. ‘‘ಈಗಾದರೂ ನಿಮಗೆ ನಂಬಿಕೆ ಆಯಿತೋ ಇಲ್ಲೋ?”

‘‘ನಂಬಿಕೆಯಾಗದೇನು ಪೂರ್ಣ ವಿಶ್ವಾಸವುಂಟಾಗಿದೆ’’ ಜೋಸೆಫರಿಂದು ಪರೆಹರಿದ ಹಾವಿನಂತಾಗಿದ್ದರು. ಯಾವದೋ ಬಹುಭಾರವಾದ ಹೊರೆಯು ಇಳಿದಂತೆ ಭಾಸವಾಗುತ್ತಿತ್ತವರಿಗೆ ಇಂದವರ ಮನೆಯಲ್ಲಿ ೬-೩ ಕೋಳಿಗಳು ಜೀವವನ್ನು ಕಳೆದುಕೊಳ್ಳಲು ಸಿದ್ಧವಾಗಿದ್ದವು. ಊರಿನಲ್ಲಿ ಈ ಸುದ್ದಿ ಕಾಳ್ಗಿಚ್ಚಿನಂತೆ ಹರಡಿತು. ಪತ್ರಿಕಾ ಪ್ರತಿನಿಧಿಗಳು ಪೋಲೀಸ ಸ್ಟೇಶನನ್ನು ಸತ್ತ ಕೀಟಕಕ್ಕೆ ಇರುವೆಗಳು ಮುತ್ತಿಕೊಂಡಂತೆ ಮುತ್ತಿಕೊಂಡರು. ಶ್ರೀಧರನಿಗೆ ನೂರಾರು ಪ್ರಶ್ನೆಗಳನ್ನು ಕೇಳಿ ಪ್ರತಿನಿಧಿಗಳು ಉತ್ತರವನ್ನು ಪಡೆಯುತ್ತಿದ್ದರು. ರಾಜಾರಾಮ ಈ ಗದ್ದಲದಲ್ಲಿ ಒಬ್ಬ ಪ್ರತಿನಿಧಿಯಾಗಿ ಬಂದಿದ್ದ. ಹೊರಗೆ ಬರುವಾಗ ಅವನು ಇದ್ದ ಸುದ್ದಿಗೆ ಬಣ್ಣಬಳಿದು ಹೇಳುತ್ತಿದ್ದ. ಇನ್ಸಪೆಕ್ಟರ ಆ ರೀತಿಯಾಗಿ ಸಂಶಯಪಟ್ಟಿದ್ದರು, ಈ ರೀತಿಯಾಗಿ ಅನುಮಾನ ತಾಳಿದ್ದರು. ಕೊಲೆಗಾರನನ್ನು ಕಂಡುಹಿಡಿಯಲು ಇಂಥಿಂಥ ಜಾಲಗಳನ್ನು ಹರಡಿದ್ದರೆಂದು ಊಹಾತೀತವಾದ ಉದಾಹರಣೆಗಳನ್ನು ಉದುರಿಸಿದ. ವೀಣಾ, ಶೇಖರ ಮೊದಲಾದವರು ಈ ಹತ್ಯೆಯು ನಾರಾಯಣನ ದಾರಣ ಆತ್ಮಹತ್ಯೆಯೊಂದಿಗೆ ಪರ್ಯಾವಸಾನ ಹೊಂದುವದೆಂದು ತಿಳಿದಿರಲಿಲ್ಲ. ಶೇಖರನೆದುರಿಗೆ ಬಾಲ್ಯದ ಅನೇಕ ಘಟನೆಗಳು ತೆರೆತೆರೆಯಾಗಿ ಸರಿದು ಹೋಗುತ್ತಿದ್ದವು. ಅವನಿಗೆ ಜೀವನದ ಕ್ಷಣಿಕತೆಯು ಅರಿವಾಗಿತ್ತು.

## — ೧೦ —

ಶ್ರೀಧರ ರಾಜಾರಾಮನ ದಾರಿಯನ್ನು ಕಾಯುತ್ತ ಕುಳಿತುಕೊಂಡಿದ್ದ. ಇನ್ಸಪೆಕ್ಟರರ ಅಪ್ಪಣೆಯಂತೆ ಕೇಫೆ ವ್ಹಿಕ್ಟೋರಿಯದಲ್ಲಿ

ಅವನು ಯಾರದೋ ದಾರಿಯನ್ನು ಕಾಯುತ್ತ ಕುಳಿತುಕೊಂಡಿದ್ದ. ಅವನು ಕಾಯುತ್ತ ಕೊಂಡ ವ್ಯಕ್ತಿಗಳು ಅಲ್ಲಿಗೆ ಬಂದರು. ಅವರು ಇವನಿಗೆ ದೂರವಾಗಿ ಕುಳಿತುಕೊಂಡದ್ದರಿಂದ ಇವನು ಅವರ ಹತ್ತಿರವೇ ಇದ್ದ ಒಂದು ಟೇಬಲ್ಲಿನಮೇಲೆ ಪತ್ರಿಕೆಯನ್ನು ಬಿಡಿಸಿ ಅವರ ಮಾತುಗಳನ್ನು ಆಲಿಸುತ್ತಿದ್ದ. ಅವರು ಸ್ಪೇಶಲ್ ರೂಮಿನಲ್ಲಿ ಕುಳಿತಿದ್ದರಿಂದ ಇವನಿಗೆ ಅವರ ಮುಖ ಕಾಣುತ್ತಿರಲಿಲ್ಲವಲ್ಲದೆ ಅವರ ಧ್ವನಿ ಅಸ್ಪಷ್ಟವಾಗಿ ಕೇಳಿ ಬರುತ್ತಿತ್ತು.

"ಇಂದು ರಾತ್ರಿ.......ಅಲ್ಲಿಗೆ........ನೀನು ಬಾ ತರುವಾಯ........" ಯಾರೋ ಒಬ್ಬರು ನುಡಿದರು. "ಈ ಕೆಲಸ ನೀನು ಮಾಡು............ ಅದನ್ನು............ಶಬ್ದಗಳೆಲ್ಲ ತುಂಡು ತುಂಡಾಗಿ ಅವನ ಕಿವಿಯನ್ನು ಸೇರುತ್ತಿದ್ದವು. ಜನದ ಗದ್ದಲವನ್ನು ಶಪಿಸಿದ. ಪಾಪ ಅವರಿಗೇನು ಗೊತ್ತು ಇವನ ಕಾರ್ಯ ತತ್ಪರತೆ. ಅವರು ಅಲ್ಲಿ ಕುಳಿತು ಅರ್ಧ ತಾಸಿನವರೆಗೆ ಏನನ್ನೋ ಮಾತನಾಡಿ ಕಡೆಗೆ ಒಬ್ಬೊಬ್ಬರಾಗಿ ಬೇರೆ ಬೇರೆ ದಿಕ್ಕಿಗೆ ತೆರಳಿದರು. ರಾಜಾರಾಮನಿಗೀಗ ಸಂದಿಗ್ಧ ಸ್ಥಿತಿಯೊದಗಿತ್ತು. ಯಾರನ್ನು ಹಿಂಬಾಲಿಸಬೇಕು? ಯಾರನ್ನು ಬಿಡಬೇಕು? ಕೊನೆಗೊಬ್ಬನನ್ನು ಅನುಸರಿಸಿ ನಡೆದ. ಅವನು ತಪ್ಪಿಸಿಕೊಂಡು ಹೋಗದಂತೆ ಜಾಗರೂಕತೆಯಿಂದ ಹಿಂಬಾಲಿಸುತ್ತಿದ್ದ. ಇಡೀ ರಾತ್ರಿ ಅವನನ್ನು ಕಾಯುವದೆ ಸರದಿಯಾಯಿತು. ಸುಮಾರು ರಾತ್ರಿ ೧೦-೧೧ ಗಂಟೆಗೆ ಆ ವ್ಯಕ್ತಿ ಹೊರಬಿದ್ದ. ಈಗ ಅವನು ತ್ವರಿತ ಗತಿಯಿಂದ ಮುಂದುವರೆಯುತ್ತ, ಹಿಂದೆ ಹೊರಳಿನೋಡುತ್ತಿದ್ದ. ರಾಜಾರಾಮನಿಗಿದು ಅಸಿಧಾರಾವ್ರತ. ಆ ವ್ಯಕ್ತಿ ಯಾವದೋ ಒಂದು ಸಂಕುಚಿತವಾದ ಸಂದಿಯಲ್ಲಿ ಹೊಕ್ಕ. ಅದು ಒಬ್ಬರಿಗೆ ಹೋಗಲು ಮಾತ್ರ ವಿಶಾಲವಾಗಿತ್ತು. ಎಡಬಲದಲ್ಲಿ ಕಟ್ಟಡದ ವಿಶಾಲವಾದ ಗೋಡೆ ಮುಗಿಲಿಗೆ ಮುತ್ತಿಡುವಂತೆ ನಿಂತಿದ್ದವು. ಕತ್ತಲು ಏನು ಕಾಣದಂತೆ ಆ ಆ ಪ್ರದೇಶದಲ್ಲಿ ತುಂಬಿಕೊಂಡಿತ್ತು. ಅದು ಎಷ್ಟು ಉದ್ದವಾಗಿತ್ತೆಂಬುದು ತಿಳಿದುಬರಲಿಲ್ಲ. ರಾಜಾರಾಮ ಆ ಕತ್ತಲೆಯ ಸ್ಥಳದಲ್ಲಿ ಒಂದೆರಡು ಸಲ ಎಡವಿದನು. ಮುಂದಿರುವ ವ್ಯಕ್ತಿಗೆ ತಾನೆಲ್ಲಿ ಅರಿಯದೆ ಢಿಕ್ಕಿ ಹೊಡೆಯುವೆನೋ ಎಂಬ ಹೆದರಿಕೆ ಅವನ ಅಂಗಾಂಗಗಳಲ್ಲಿ ಪಸರಿಸಿತ್ತು. ತಡವರಿಸುತ್ತ ಗೋಡೆಗೆ ಕೈಯಾಡಿಸಿಕೊಂಡು ಕತ್ತಲಲ್ಲಿ ಕಣ್ಣಿದ್ದರೂ ಕುರುಡನಂತೆ ಸಾಗಿದ್ದ. ಒಂದೆರಡುಸಲ ಬಿದ್ದ ನೋವಿಗೆ ಮೊಣಕಾಲು ತೆರೆದು ಭಗಭಗ

ನೆಂದು ಉರಿಯುತ್ತಿತ್ತು. ೧೦-೧೫ ನಿಮಿಷ ಅವನು ಆ ರೀತಿ ಮುಂದು ವರಿದರೂ ಬೆಳಕಿನ ಕಿರಣವೊಂದಾದರೂ ಬೇಗ ಅವನ ಮನದ ನಿರಾಶೆಯ ಅಂಧಕಾರವನ್ನು ಹೋಗಲಾಡಿಸುವ ಪ್ರಯತ್ನ ಮಾಡಲಿಲ್ಲ. ಉದ್ವೇಗ್ನ ಹಬ್ಬಿದ ಈ ನಿಶೆ ಮರೆಯಾಗಲಾರದೆಂಬ ಭಾವನೆ ಅವನಿಗೊಮ್ಮೊಮ್ಮೆ ಜನಿ ಸುತ್ತಿತ್ತು. ಆದರೆ ದೂರದಲ್ಲೊಂದು ಮಂದವಾದ ದೀಪ ಅವನನ್ನು ಕತ್ತ ಲೆಯ ಶಾಪದಿಂದ ಬಿಡುಗಡೆ ಮಾಡಿತು. ರಾಜಾರಾಮ ಆ ದೀಪದ ಬೆಳಕಿ ನಲ್ಲಿ ಮೂರುನಾಲ್ಕು ವ್ಯಕ್ತಿಗಳ ಛಾಯೆ ಚಲಿಸುತ್ತಿರುವದನ್ನು ಕಂಡ. ಈ ವ್ಯಕ್ತಿಯು ಹೋಗುವ ತಾಣವಾದರೂ ಅದೇ ಇರಬಹುದು. ತಾನು ಅನು ಸರಿಸಿ ಬರುತ್ತಿದ್ದ ವ್ಯಕ್ತಿ ಅವನಿಗೆ ಕಾಣಲಿಲ್ಲ. ಹಿಂದೆ ಉಳಿದನೇನು? ಅದಂತು ಸಾಧ್ಯವಿಲ್ಲ. ಇಬ್ಬರು ಆ ರೀತಿಯಾಗಿ ಅಡ್ಡಾಡಲು ಸಾಧ್ಯವೇ ಇಲ್ಲ. ತನ್ನ ಗೆಳೆಯನ ಮಾತು ಕೇಳಿ ಈ ಗಂಡಾಂತರ ಪರಿಸ್ಥಿತಿಗೆಡೆ ಗೊಡಬಾರದಾಗಿತ್ತೆಂದು ಅವನ ಹೇಡಿತನ ಅವನೆದುರಿಗೆ ಗರಿಗೆದರಿ ನಿಂತು ಕ್ಷಣಕಾಲ ಅವನನ್ನು ಮಂಕು ಮಾಡುತ್ತಿತ್ತು. ದೀಪ ಸಮೀಪವಾದಂತೆ ಅವನ ಕಣ್ಣುಗಳು ಚುರುಕಾಗುತ್ತಿದ್ದವು. ಈಗ ಅಲ್ಲಿಯ ದೃಶ್ಯ ಸ್ಪಷ್ಟವಾಗಿ ಕಾಣಲಾರಂಭಿಸಿತು. ಇವನು ಹಿಂಬಾಲಿಸಿದ ವ್ಯಕ್ತಿ ಆ ಸ್ಥಳವನ್ನು ಹೋಗಿ ಸೇರಿದ್ದ. ಎದುರುಗಡೆ ಒಂದು ಟ್ರಕ್ಕು ನಿಂತಿತ್ತು. ಅದರಲ್ಲಿ ಸಾಮಾನು ಗಳನ್ನು ಹೇರುತ್ತಿದ್ದರು ಮುಂದೆ ನಡೆಯುವದನ್ನು ಅತ್ಯಂತ ಕೌತುಹಲ ದಿಂದೀಕ್ಷಿಸುತ್ತಿದ್ದ ರಾಜಾರಾಮನ ಕಣ್ಣಿಗೆ ಕತ್ತಲು ಕವಿದಂತಾಗಿ ಕೆಳಗುರು ಳಿದ. ಮರುದಿನ ರಾಜಾರಾಮ ಹಾಸ್ಪಿಟಲದಿಂದಲೇ ನಡೆದ ಸಂಗತಿಯನ್ನು ಇನಸ್ಪೆಕ್ಟರರಿಗೆ ತಿಳಿಸಿದ. ಶ್ರೀಧರ ಅವನ ಪರಿಸ್ಥಿತಿಯನ್ನು ಕಂಡು ಬಹಳ ವಿಷಾದ ವ್ಯಕ್ತಮಾಡಿದ. ಮೈಯಲ್ಲಿ ಎರಡುಮೂರು ಕಡೆಗೆ ಗಾಯಗ ಳಾಗಿದ್ದವು. ಗಾಯದಿಂದ ರಾಜಾರಾಮನಿಗೆ ನೋವಾಗುತ್ತಿದ್ದರೂ ಯಾವದೋ ಆಂತರಿಕ ತೃಪ್ತಿ ಅವನನ್ನು ಸಮಾಧಾನ ಪಡಿಸುತ್ತಿತ್ತು.

''ವೀಣಾ, ಏ ವೀಣಾ, ನಿನಗೆ ಯಾರದೋ ಟೆಲಿಫೋನ ಕಾಲ ಬಂದಿದೆ ನೋಡು.''—ಕೆಳಗಿನಿಂದ ಮಾಧವ ಕೂಗಿ ಹೇಳಿದ. ವೀಣಾ ಆಸ್ಕರ ವಾಯಿಲ್ಡನ ''ದಿ ಪಿಕ್ಚರ ಆಫ ಡೋರಿಯನ್ ಗ್ರೆ'' ದಲ್ಲಿ ಮಗ್ನಳಾ ಗಿದ್ದಳು. ಮಾಧವ ಕರೆದದ್ದು ಕೇಳಿ ಕೆಳಗಿಳಿದು ಬಂದಳು

''ಯಾರದು ಫೋನ ಮಾಧವ?'' ''ನಿನಗಾಗಿಯೇ ಬಂದಿದೆ.''

''ಹಲೋ, ಯಾರವರು ಮಾತನಾಡುತ್ತಿರುವವರು?''

“ವೀಣಾದೇವಿ, ನಾನು ಇನಸ್ಪೆಕ್ಟರ ಶ್ರೀಧರ. ಅಂದು ನೀವು ಅಶ್ವತ್ಥರಾಯರ ಮನೆಯನ್ನು ಎಷ್ಟು ಗಂಟೆಗೆ ತಲುಪಿದೆನೆಂದು ಹೇಳಿದಿರಿ.”

“ಅಂದು ಎಂದರೆ?” “ನೀವು ಈ ನಗರಕ್ಕೆ ಹೊಸದಾಗಿ ಬಂದ ದಿನ.”—ಶ್ರೀಧರ ಮಾರ್ನುಡಿದ. “ಅಂದಿನದಿನವೇ, ಸುಮಾರು ೯-೩೦ ಕ್ಕೋ ಅಥವಾ ೯-೪೦ ಕ್ಕೋ ಅಲ್ಲಿ ಇದ್ದೆ.”

“ಖಚಿತವಾಗಿ ನಿಮಗೆ ಗೊತ್ತಿದೆಯೋ?”

“ಯಾಕೆ ನನಗೆ ಖಚಿತವಾಗಿ ಗೊತ್ತಿದೆ. ನಿಮಗೇನಾದರೂ ಸಂದೇಹ........”

“ಹೌದು. ನೀವು ಹೇಳುತ್ತಿರುವದು ಸುಳ್ಳೆಂದು ನಿಮಗೆ ತಿಳಿದಿದೆ. ೯-೩೦ ಕ್ಕೆ ನೀವು ಅಶ್ವತ್ಥರಾಯರ ಮನೆಗೆ ತೆರಳಿದ್ದು ಎರಡನೆಯ ಸಲ. ಅದಕ್ಕೂ ಮೊದಲೊಮ್ಮೆ ನೀವು ಅಲ್ಲಿಗೆ ಹೋಗಿದ್ದಿರಿ. ಅಂದು ನಡೆದದ್ದನ್ನು ಇಲ್ಲಿಗೆ ಬಂದು ನೀವು ನಿಜವಾಗಿ ಹೇಳಿ ಇಲ್ಲದಿದ್ದರೆ ನೀವೇ ತೊಡಕಿನಲ್ಲಿ ಸಿಕ್ಕಿಹಾಕಿಕೊಳ್ಳಬೇಕಾಗುತ್ತದೆ.”

--ವೀಣಳ ಮೋರೆ ಅದನ್ನು ಕೇಳಿ ಬೆಳ್ಳಗಾಗಿತ್ತು. ಕೈಯಲ್ಲಿಯ ಪುಸ್ತಕ ಹಿಡಿತ ತಪ್ಪಿ ಕೆಳಗೆ ಬಿದ್ದಿತ್ತು.

ಶ್ರೀಧರ ಇಂದು ಆನಂದದ ಸ್ಥಿತಿಯಲ್ಲಿದ್ದನೆಂದು ಅವನ ನಗುಮೋರೆ ಹಾಸ್ಯ ಹೇಳುತ್ತಿದ್ದವು. ಅವನ ಉತ್ಸಾಹ ನಡೆ ನುಡಿಯಲ್ಲಿ ಪ್ರಕಟವಾಗುತ್ತಿದ್ದವು. ಶೇಖರನನ್ನು ಫೋನಿನಲ್ಲಿ ಕರೆದು ಮಾತನಾಡಿಸಿದ—

“ಮಿ. ಶೇಖರ ಕೊಲೆಯ ಕೆಲಸ ಮುಗಿದದ್ದಕ್ಕಾಗಿ ನಿಮ್ಮ ಪಾರ್ಟಿಯಾಗಲಿಲ್ಲವಲ್ಲ.”

“ಏನು ಇನಸ್ಪೆಕ್ಟರ?” ಶೇಖರ ಅಚ್ಚರಿಯಿಂದ ಅವನನ್ನು ಮತ್ತೊಮ್ಮೆ ಪ್ರಶ್ನಿಸಿದ. ಶ್ರೀಧರ ಅದೇ ಮಾತನ್ನು ಮತ್ತೊಮ್ಮೆ ಹೇಳಿದ.

“ನಿಮಗೆ ಬೇಕೆಂದರೆ ನಾನು ಕೊಡಲು ಸಿದ್ಧನಾಗಿದ್ದೇನೆ.”

—ಶೇಖರ ತನಗೆ ಅದು ಒಪ್ಪಿಗೆ ಇಲ್ಲದಂತೆ ನುಡಿದ. “ಇಡುವದಾದರೆ ಎಂದು ಇಡಬೇಕು ನೀವೇ ಹೇಳಿ.”

“ನಾಳೆಯೇ ಅದಕ್ಕೆ ವ್ಯವಸ್ಥೆ ಮಾಡಿ.” “ನಾಳೆಯೇ”—ಶೇಖರ ಅಚ್ಚರಿಯಿಂದ ಕೇಳಿದ.

“ಯಾಕೆ ಅದರಲ್ಲಿ ಅಸಾಧ್ಯವೇನಿದೆ. ನಾಳೆ ನೋಡಿ ಪಾರ್ಟಿಯ ಜವಾಬ್ದಾರಿ ಅತಿಥಿಗಳನ್ನು ಸೂಚಿಸುವ ಕೆಲಸ ನನ್ನದು. ನಾಳೆಯು

ಪಾರ್ಟಿಯಲ್ಲಿಯೇ ನಿಮ್ಮ ತಂದೆಯು ಬ್ಲ್ಯಾಕಮೇಲ ಯಾರು ಮಾಡುತ್ತಿದ್ದ ರೆಂದು ಹೇಳುವೆ.''

''ಬ್ಲ್ಯಾಕಮೇಲ! ಶೇಖರ ಅಚ್ಚರಿಯಿಂದ ನುಡಿದ.

ಶೇಖರನಿಂದ ಶ್ರೀಧರ ಸೂಚಿಸಿದ ಅತಿಥಿಗಳಿಗೆಲ್ಲ ಆಗ್ರಹದ ಆಮಂತ್ರಣ ಹೋಯಿತು. ಮೇಜವಾನಿ ಬಹಳ ಉತ್ಸಾಹದಿಂದ ನಡೆಯಿತು. ಅದಕ್ಕೆಲ್ಲ ಶ್ರೀಧರ ಹಿನ್ನೆಲೆಯಾಗಿದ್ದ. ಮರುದಿನ ಸಂಜೆ ಅವನೆ ಅತಿಥಿಗಳ ಸ್ವಾಗತವನ್ನು ಬಯಸಿದ. ''ಬನ್ನಿ, ಬನ್ನಿ, ಆನಂದ ಪ್ರಭುಗಳೆ ಎಂದು ಅವರನ್ನು ಒಳಗೆ ಕಳುಹಿಸಿದ. ಪ್ರಸನ್ನ ಕುಮಾರರೂ ಬಂದರು. ಟೇಬಲಿನ ಸುತ್ತಲೂ ಎಲ್ಲರೂ ಕುಳಿತುಕೊಂಡರು. ರಾಜಾರಾಮ ಕುಂಟುತ್ತ ಅಲ್ಲಿಗೆ ಆಗಲೇ ಪ್ರತ್ಯಕ್ಷನಾಗಿದ್ದ. ಶ್ರೀಧರ ಸುತ್ತಲೂ ಕುಳಿತವರೊಮ್ಮೆ ಎಣಿಸಿದ. ಶೇಖರ, ಮಾಧವ, ಸುರೇಶ, ವೀಣಾ, ರಾಜಾರಾಮ, ಆನಂದ ಪ್ರಭುಗಳು, ಪ್ರಸನ್ನಕುಮಾರ, ಜೋಸೆಫ ತನ್ನನ್ನು ಹಿಡಿದು ಒಟ್ಟು ನವಗ್ರಹಗಳು. ''ನರಸಮ್ಮ ನೀವು ಕಳಿತೇಬಿಡಿ. ಒಟ್ಟು ಹತ್ತು ಜನವಾದಂತಾಗುವದು.'' ನರಸಮ್ಮ ಅವನ ಆಗ್ರಹದ ವಿನಂತಿಯನ್ನು ತಿರಸ್ಕರಿಸದಾದಳು.

''ಶ್ರೀಧರ ಇಂದು ಬಹಳ ಹರುಷದಲ್ಲಿದ್ದಾರೆಂದು ಕಾಣುತ್ತದೆ. ಬಹುಶಃ ಕೊಲೆಯ ಭಾರ ಇಳಿದಿರಬಹುದು.'' ಪ್ರಸನ್ನ ಕುಮಾರರು ನಗುತ್ತ ಕೇಳಿದರು.

''ಇವರಿಗೆ ಭಾರವಾದರೇನು ಸ್ವಾಮಿ ನಮ್ಮ ಪತ್ರಿಕೆಗಳಿಗೆ ಅದೊಂದು ಆಹಾರದ ವಿಷಯವಾಗಿತ್ತು.—ರಾಜಾರಾಮ ಏನನ್ನೊ ತಿನ್ನುತ್ತ ಹೇಳಿದ.

''ಬೆಕ್ಕಿಗೆ ಆಟವಾದರೆ ಇಲಿಗೆ ಪ್ರಾಣಸಂಕಟ. ನಿನಗೇನಯ್ಯ ಅದರ ಸಂಕಟ. ನಾವೆಲ್ಲ ಮೇಲಿನವರ ಗುಲಾಮರು. ಕೈಕಟ್ಟಿಕೊಂಡು ಕುಳಿತುಕೊಂಡರೆ ಮನೆಗೆ ಹೋಗಬೇಕಾದೀತು.''

''ದ್ವೇಷಭಾವನೆ ಇಷ್ಟು ಪ್ರಖರವೆಂದು ತಿಳಿದಿರಲಿಲ್ಲ ನೋಡಿ''—ಆನಂದ ಪ್ರಭುಗಳು ತಮ್ಮ ಜೋತು ಬಿದ್ದ ಗದ್ದಕ್ಕೆ ಅಂಗೈ ಆಧಾರವನ್ನು ಕೊಟ್ಟು ಹೇಳಿದರು. ವಿಷಯದ ರೂಪ ಬದಲಾಯಿತು.

''ಇಂಥ ನೂರಾರು ಕೇಸುಗಳನ್ನು ಕಂಡಿದ್ದೇವೆ ನಾವು''—ಜೋಸೆಫರು ಹೆಮ್ಮೆಯಿಂದ ಹೇಳಿದರು. ''ನಾನು ಈ ಡಿಪಾರ್ಟಮೆಂಟಿಗೆ ಬಂದಾಗ ಒಂದು ವಿಚಿತ್ರ ಕೊಲೆಯ ಕೇಸು ಬಂದಿತ್ತು.'' ಎಂದು ಶ್ರೀಧರ ಹಳೆಯ

ನೆನಹೊಂದನ್ನು ಕೆನಕಿದ. ಎಲ್ಲರೂ ಏಕಾಗ್ರತೆಯಿಂದ ಅವನ ಮೋರೆ ನೋಡಿದರು.

"ಆ ಕೇಸಿನಲ್ಲಿ ಲಿಯೋನಾರ್ಡ ಬೇಟ್ಸನೆಂಬ ಒಬ್ಬ ವ್ಯಕ್ತಿಯಿದ್ದ. ಅವನದಾದರೂ ಇವೇ ರೀತಿ ಕೊಲೆಯಾಗಿತ್ತು. ಲಿಯೋನಾರ್ಡ ಊರಿನಲ್ಲಿಯ ಒಬ್ಬ ಪ್ರತಿಷ್ಠಿತ ವ್ಯಕ್ತಿಯಾಗಿದ್ದ. ನೂರಾರು ವ್ಯವಹಾರಗಳಲ್ಲಿ ಅವನ ಪಾಲಿತ್ತು. ಒಂದುದಿನ ಅವನು ನಾಟಕ ನೋಡಲು ತೆರಳಿದ್ದ. ಮರುದಿನ ಕಾರಿನಲ್ಲಿ ಅವನ ಕೊಲೆಯಾದ ಹೆಣ ದೊರೆಯಿತು. ನಾಟಕದಿಂದ ಬರುವಾಗ ಯಾರೋ ಅವನನ್ನು ಸಂಹರಿಸಿದ್ದರು. ನಾನಾಗ ಹೊಸಬ. ನನ್ನ ಮೇಲಿನ ಇನ್ಸಪೆಕ್ಟರರು ಚತುರರಾಗಿದ್ದರು. ಅವರೇ ಇದನ್ನು ಬಯಲಿಗೆ ತಂದರು. ಲಿಯೋನಾರ್ಡ ಬೇಟ್ಸನಿಗೆ ಮಕ್ಕಳಿರಲಿಲ್ಲ. ಒಬ್ಬಂಟಿಗ. ಮನೆಯಲ್ಲಿ ನಾಲ್ಕು ಆಳು ಒಬ್ಬ ದಾಸಿಯಿದ್ದಳು. ಲಿಯೋನಾರ್ಡ ಭಯಂಕರ ಕ್ರೂರನಾದ ವ್ಯಕ್ತಿಯಾಗಿದ್ದ. ಮನೆಯ ಆಳುಗಳು ತಪ್ಪು ಮಾಡಿದರೆ ರಕ್ತ ಒಸರುವಂತೆ ಹಂಟರಿನಿಂದ ಜಡಿಯುತ್ತಿದ್ದ. ಇದಕ್ಕೆ ಅವನ ಬಾಲ್ಯದಲ್ಲಿ ಆದ ಪರಿಣಾಮಗಳು ಕಾರಣವಾಗಿದ್ದವು. ಮಾನಸಶಾಸ್ತ್ರದ ಪ್ರಕಾರ ಅವನ ಬಾಲ್ಯದಲ್ಲಿ ಮೂಡಿನಿಂತ ಚಿತ್ರಗಳು ಅವನು ದೊಡ್ಡವನಾದರೂ ಅಳಿಯಲಿಲ್ಲ.

ಲಿಯೋನಾರ್ಡ ಮನೆತನ ಕ್ರೂರತನಕ್ಕೆ ಹೆಸರುವಾಸಿಯಾಗಿತ್ತು. ಇವನ ತಂದೆಗೆ ನಾಲ್ಕನೇಯೋ ಐದನೆಯೋ ಹೆಂಡತಿಯಿದ್ದಳು. ಇಬ್ಬರು ಅವನ ಕಾಟ ತಾಳಲಾರದೆ ಓಡಿಹೋಗಿದ್ದರು. ಇಬ್ಬರು ಅವನ ಕ್ರೂರತನಕ್ಕೆ ಬಲಿಯಾಗಿದ್ದರು. ಹೆಂಡಂದಿರು ತಿರುಗಿ ವಾದಿಸಿದರೆ, ಅಥವಾ ಜನರಿಗೆ ಇವನ ಕ್ರೂರತನವನ್ನು ತಿಳಿಸಿದರೆ ಅವರನ್ನು ಹೊಗೆ ತುಂಬಿದ ಕೋಣೆಯಲ್ಲಿ ಹಾಕುತ್ತಿದ್ದನಂತೆ! ಲಿಯೋನಾರ್ಡನ ಅಣ್ಣನಾದರೂ ಇದೆ ತರಹದವ. ಈ ಎಲ್ಲ ಕ್ರೂರಕೃತ್ಯಗಳ ಕರಾಳ ಹಿನ್ನೆಲೆಯಲ್ಲಿ ಅವನ ಬಾಲ್ಯ ರೂಪುಗೊಳ್ಳುತ್ತಿತ್ತು. ತಂದೆಯ ರಕ್ತ ಮಗನಲ್ಲಿ ಸಂಪೂರ್ಣವಾಗಿ ಇಳಿದುಬಂದಿತ್ತು. ಸಣ್ಣವನಿರುವಾಗಲೇ ಚಿಕ್ಕಪುಟ್ಟ ಕಳವುಗಳನ್ನು ಮಾಡಿ ಜೇಲಿನ ಪರಿಚಯವನ್ನು ಮಾಡಿಕೊಂಡಿದ್ದ. ಇವನ ತಾಯಿ ತಂದೆಗಳು ಸತ್ತಮೇಲೆ ಇವನ ಅಣ್ಣ ಇವನನ್ನು ಇಟ್ಟುಕೊಳ್ಳಲಾರದೆ ಹೊರದೂಡಿದ. ಒಂದು ಕಡೆಗೆ ಕೆಲಸ ಮಾಡುವದು ಲಿಯೋನಾರ್ಡನ ಸ್ವಭಾವವಲ್ಲದ್ದರಿಂದ ಯಾರದೋ ಮಾತನ್ನು ಕೇಳಿಕೊಂಡು ಉತ್ತರ ಹಿಂದುಸ್ತಾನಕ್ಕೆ

ತೆರಳಿ ಅಲ್ಲಿ ಕಷ್ಟದಿಂದ ಯಾವದೋ ಕಾರಖಾನೆಯಲ್ಲಿ ಕೆಲಸ ದೊರಕಿಸಿದ.
ನಾನು ಮೊದಲೇ ಹೇಳಿದಂತೆ ಇವನದು ಮುಂದೆಹೋಗುವ ಸ್ವಭಾವವಾದ್ದ
ರಿಂದ ಇವನು ಅಲ್ಲಿ ಕುಶಲನಾದ ಕೆಲಸಗಾರನೆಂದು ಹೆಸರುವಾಸಿಯಾದ.
ಅಧಿಕಾರಿಗಳು ಇವನನ್ನು ತಮ್ಮ ಕೆಟ್ಟ ಕೆಲಸಗಳಿಗೆ ಉಪಯೋಗಿಸಿಕೊಂಡರು
ಇವನು ಅವರ ಬಲಗೈಯಾಗಿ ಪರಿಣಮಿಸಿದ. ಆಳುಗಳೆಲ್ಲ ಇವನಿಗೆ ಹೆದರಿ
ನಡೆಯುತ್ತಿದ್ದರು. ಇಲ್ಲಿಂದಲೇ ಅವನ ಸಂಪಾದನೆ ಆರಂಭವಾಯಿತು.
ಯಾರಿಗೂ ತಿಳಿಯದಂತೆ ನಾಲ್ಕೈದು ಜನರನ್ನು ಕೂಡಿಸಿಕೊಂಡು ಕಾರ
ಖಾನೆಯ ಮಾಲನ್ನು ಗುಪ್ತವಾಗಿ ಮಾರಲಾರಂಭಿಸಿದ. ಅಲ್ಲಿಯೇ ಅವನು
ಬಹಳ ಹಣ ಸಂಪಾದಿಸಿದನು. ಇವನ ಅಪರಾಧಕ್ಕೆ ನಿರಪರಾಧಿಗಳು
ಬಲಿಯಾಗುತ್ತಿದ್ದರು. ತನ್ನಮೇಲೆ ಯಾವ ಆಪಾದನೆಯು ಬರದಂತೆ ಪಾರಾ
ಗುವ ಚಾಣಾಕ್ಷತನ ಅವನಲ್ಲಿತ್ತು. ಇವನಿಗಿನ್ನು ಲಗ್ನವಾಗಿರಲಿಲ್ಲ. ಆದರೆ
ಕಾರಖಾನೆಯಲ್ಲಿಯ ಒಬ್ಬ ವಿವಾಹಿತ ಸ್ತ್ರೀಯನ್ನು ಪ್ರೀತಿಸುತ್ತಿದ್ದ. ಅವಳ
ಗಂಡನಿಗೆ ಇದು ತಿಳಿದು ಪರಿಸ್ಥಿತಿ ವಿಷಮವಾಯಿತು. ಅವಳ ಗಂಡನಿಗೆ
ಲಿಯೋನಾರ್ಡನ ಗುಪ್ತ ವ್ಯವಹಾರದ ಪರಿಚಯವಿತ್ತು. ಇದು ತಿಳಿದ
ಲಿಯೋನಾರ್ಡ ತಾನು ಜೇಲಿಗೆ ಹೋಗಬೇಕಾಗುವದೆಂದು ತಿಳಿದು ಅದ
ರಿಂದ ಪಾರಾಗಲು ಉಪಾಯವನ್ನು ಹುಡುಕತೊಡಗಿದ. ಮರುದಿನ
ಇವನ ವೈರಿ ಬಾಯಲರಿನಲ್ಲಿ ಬೂದಿಯಾಗಿದ್ದ. ಅದೆಲ್ಲ ಆಕಸ್ಮಿಕವೆಂದೆ
ಎಲ್ಲರ ಭಾವನೆ.

ಸುಮಾರು ೮-೧೦ ವರುಷಗಳ ಅವಧಿಯಲ್ಲಿ ಲಿಯೋನಾರ್ಡ ಮೇನೆ
ಜರ ಪದವಿಯನ್ನು, ಬಹಳಷ್ಟು ಹಣವನ್ನು ಸಂಪಾದಿಸಿದ. ಮಾಲಿಕರ
ಮನೆಗೆ ಇವನು ಆಗಾಗ ಹೋಗಿಬರುತ್ತಿದ್ದ. ಅವರ ಹೆಂಡತಿಯ ಮೇಲೆ
ಇವನ ಹದ್ದಿನ ದೃಷ್ಟಿ ಎರಗಿತು. ಮಾಲಿಕರಿಗೆ ಇದೆಲ್ಲ ತಿಳಿದು ಒಂದು
ರಾತ್ರಿ ಕಾರಖಾನೆಯಿಂದ ಮಾಲು ಸಾಗಿಸುತ್ತಿದ್ದ ಲಿಯೋನಾರ್ಡನನ್ನು
ಮಾಲುಸಹಿತ ಹಿಡಿದರು. ಆದರ ಮರುದಿನವೇ ಕಾರಖಾನೆಯ ಮಾಲ
ಕರು ಉರುಲು ಹಾಕಿಕೊಂಡಿದ್ದರು. ಕಾರಖಾನೆಗಾದ ಹಾನಿಯೇ ಅವರ
ಮೃತ್ಯುವಿಗೆ ಕಾರಣವಾಯಿತೆಂದು ಕಾಮಗಾರರಿಂದ ಹೇಳಿಸಿದ. ಇಡೀ
ಕಾರಖಾನೆಯನ್ನೇ ದೋಚುವ ಉದ್ದೇಶ ಅವನದಾಗಿತ್ತು. ಒಡೆಯರ
ಮನೆಗೆ ಶನಿಯಂತೆ ಗಂಟುಬಿದ್ದದ್ದರಿಂದ ಅವರ ಅಮೃತದಂಥ ಸಂಸಾರದಲ್ಲಿ
ವಿಷವಾಹಿನಿ ಹರಿಯಿತು. ಮನೆಯೊಡತಿ ಓಡಿಹೋಗಬೇಕೆಂದು ಮಾಡಿ

ದಾಗ ಅವಳನ್ನು ಬಂಧನದಲ್ಲಿರಿಸಿ ಭೆಟ್ಟಿಯಾಗಲು ಬಂದವರನ್ನು ಅವರಿಗೆ ದುಃಖದಿಂದ ಮೋರೆ ತೋರಿಸಲು ಸಾಧ್ಯವಿಲ್ಲವೆಂದು ಹೇಳಿ ಕಳುಹಿಸುತ್ತಿದ್ದ ಒಡೆಯರಿಗೊಬ್ಬ ೧೨-೧೩ ವರುಷದ ಬಾಲಕನಿದ್ದ. ಅವನು ಲಿಯೋನಾರ್ಡನ ಕ್ರೂರ ನಖಗಳಿಂದ ಪಾರಾದ. ಲಿಯೋನಾರ್ಡ ಅವನನ್ನು ಹುಡುಕಿಸಲು ಪ್ರಯತ್ನಿಸಿ ವಿಫಲನಾದ. ಒಡತಿ ಕೆಲದಿನಗಳಲ್ಲಿಯೇ ತೀರಿಕೊಂಡಳು. ಆದರೆ ಲಿಯೋನಾರ್ಡ ಅವಳನ್ನು ವಿಷವಿಟ್ಟು ಕೊಂದಿದ್ದ. ಪೋಲೀಸರಿಗೆ ಸಂಶಯ ಬಂದಿತು. ಆದರೆ ಅದರಲ್ಲಿ ವಿಶ್ವಪ್ರಯತ್ನದಿಂದ ಪಾರಾಗಿ ಇನ್ನು ಅಲ್ಲಿರುವದು ತರವಲ್ಲವೆಂದು ತಿಳಿದು ದಕ್ಷಿಣಕ್ಕೆ ಬಂದು ಒಬ್ಬ ಪ್ರತಿಷ್ಠಿತ ವ್ಯಕ್ತಿಯಾದ.ಇವನ ರಹಸ್ಯ ಇತಿಹಾಸವನ್ನು ತಿಳಿದ ಒಬ್ಬ ವ್ಯಕ್ತಿ ನಗರದಲ್ಲಿದ್ದ.ಒಮ್ಮೆ ಅವನಿಗೆ ವಿಪರೀತಹಾನಿಯಾಗಿ ಬೀದಿಯಭಿಕಾರಿಯಾಗುವ ಸಮಯದಲ್ಲಿ ಅವನಿಗೆ ಲಿಯೋನಾರ್ಡ ಬೇಟ್ಸನ ನೆನಪಾಯಿತು.ಅಲ್ಲಿಂದಲೇ ಬೇಟ್ಸನ ಬ್ಲ್ಯಾಕಮೇಲ ಆರಂಭವಾಯಿತು.ಮುಂದೆ ಆ ವ್ಯಕ್ತಿಗೆ ಶುಕ್ರದೆಸೆ ಆರಂಭವಾದ್ದರಿಂದ ಅವನು ಲಿಯೋನಾರ್ಡನನ್ನು ಸುಲಿಯುವದು ಬಿಟ್ಟ. ಆದರೆ ಇವರಿಬ್ಬರ ಗುಪ್ತವ್ಯಾಪಾರವನ್ನು ಕಂಡ ವ್ಯಕ್ತಿ ಇನ್ನೊಂದಿತ್ತು. ಅದು ಬ್ಲ್ಯಾಕಮೇಲ ಮಾಡಲು ಪ್ರಾರಂಭಿಸಿತು. ಅಂತು ಲಿಯೋನಾರ್ಡನಿಗೆ ಹಣ ಕೊಡುವದು ತಪ್ಪಲಿಲ್ಲ. ನಾಟಕದಿಂದ ಬರುವಾಗ ಲಿಯೋನಾರ್ಡನ ಕೊಲೆಯಾಯಿತು. ನಮಗೆಲ್ಲ ತಲೆತುರಿಸಿಕೊಳ್ಳುವ ವಿಷಯು. ಕೊಲೆಗಾರನು ಸಹ ಸಿಕ್ಕ ಲಿಯೋನಾರ್ಡ ಯಾವ ಕಾರಖಾನೆಯಲ್ಲಿ ಕೆಲಸ ಮಾಡುತ್ತಿದ್ದನೋ ಆದರ ಒಡೆಯನಿಗೆ ಒಬ್ಬ ಹುಡುಗನಿದ್ದನೆಂದು ಮೊದಲೇ ಹೇಳಿದ್ದೇನೆ. ಅವನೇ ಮುಂದೆ ದೊಡ್ಡವನಾದ. ಅದರಂತೆ ಅವನಲ್ಲಿ ಪ್ರತೀಕಾರ ತೃಷೆ ಬೃಹದಾಕಾರ ತಾಳಿತ್ತು. ಲಿಯೋನಾರ್ಡನನ್ನು ಹುಡುಕುತ್ತ ಅಲೆಯುತ್ತಿದ್ದ ಅವನು ಇಲ್ಲಿಗೆ ಬಂದು ಸುಸಂದರ್ಭಕ್ಕಾಗಿ ಕಾಯ್ದು ತನ್ನ ಪೂರ್ವ ವೈರಿಯ ಕೊಲೆಮಾಡಿದ."

—ಶ್ರೀಧರ ದೀರ್ಘವಾದ ಹಳೆಯ ಕೇಸನ್ನು ವಿವರಿಸಿದ. ಎಲ್ಲರೂ ಕಲ್ಲಿನ ಮೂರ್ತಿಗಳಂತೆ ಆ ಕತೆಯನ್ನು ಕೇಳುತ್ತಿದ್ದರು. ರಾಜಾರಾಮು ತಿನ್ನುವದನ್ನು ತ್ಯಜಿಸಿ ಆಲಿಸುತ್ತಿದ್ದನೆಂದಮೇಲೆ ವಿಷಯ ವಿಸ್ಮಯಕರವಾಗಿರಲೇ ಬೇಕು.

"ನಿಜವಾಗಿ ಅತ್ಯಂತ ವಿಸ್ಮಯಕಾರಕ ಕೇಸಿದು!"-ಪ್ರಸನ್ನಕುಮಾರರು ಉದ್ಗಾರ ಹೊರಹೊಮ್ಮಿಸಿದರು.

''ದ್ವೇಷಬುದ್ಧಿಯು ಇಷ್ಟು ಪ್ರಖರವೇ?'' ವೀಣಾ ನಿಷ್ಠೆರಗಾಗಿ ಶ್ರೀಧರನನ್ನು ನಿಟ್ಟಿಸಿದಳು.

ಶ್ರೀಧರ ಎಲ್ಲರೆಡೆಗೆ ನೋಡಿ ಮುಗುಳ್ನಗೆಯನ್ನು ನಕ್ಕ. ನಗುತ್ತ–

''ಆ ವ್ಯಕ್ತಿಗಳೆಲ್ಲ ಇಲ್ಲಿಯೇ ಇರುವರೆಂದರೆ ನೀವು ದಿಙ್ಮೂಢರಾಗ ಬಹುದು.'' ಎಂದ.

''ಏನು ನೀವು ಮಾತನಾಡುವದು ಇನ್ಸಪೆಕ್ಟರ." ವೀಣಾ ಒರಟಾ ಗಿಯೇ ಕೇಳಿದಳು.

''ತಾಳ್ಮೆಯಿರಲಿ ವೀಣಾದೇವಿ. ಅಶ್ವತ್ಥರಾಯರ ಕೊಲೆ ಮಾಡಿ ದವನು ನಾರಾಯಣನಲ್ಲ."

''ಹಾಗಾದರೆ ಯಾರು?"–ಶೇಖರ ಸೆಟೆದು ಕೇಳಿದ.

''ನಾರಾಯಣನದು ಆತ್ಮಹತ್ಯವಲ್ಲ. ಹತ್ಯೆ ಅವನು ಸಹ ಕೊಲೆ ಯಾಗಿದ್ದಾನೆ."

''ಆಂ'' ಎಂದ ಜೋಸೆಫರ ಕೈಯಲ್ಲಿಯ ತುತ್ತು ಕೆಳಗೆ ಬಿದ್ದಿತು.

''ನಿಜವಾಗಿ ನಾರಾಯಣನ ಕೊಲೆಯಾಗಿದೆ. ಅಶ್ವತ್ಥರಾಯರ ಕೊಲೆಯ ವಿಷಯದಲ್ಲಿ ಅವನಿಗೇನು ತಿಳಿದಿರಲಿಲ್ಲ."

"ಹಾಗಾದರೆ ನಿಜವಾದ ಕೊಲೆಗಾರನಾರು?" ವೀಣಾ ಕೇಳಿದಳು.

"ಅವನು ನಿಮ್ಮಲ್ಲಿಯೇ ಇದ್ದಾನೆ. ಮಿ. ಪ್ರಸನ್ನಕುಮಾರ ನೀವಿನ್ನು ಮುಚ್ಚಿಟ್ಟು ಪ್ರಯೋಜನವಿಲ್ಲ." ಎಲ್ಲರ ದೃಷ್ಟಿ ಪ್ರಸನ್ನಕುಮಾರರ ಕಡೆಗೆ ತಿರುಗಿತು.

"ಮಿ. ಇನಸ್ಪೆಕ್ಟರ ಇಲ್ಲದ್ದೊಂದು ಸಂದೇಹಿಸಿ ಹಿಂದುಗಡೆ ಪಶ್ಚಾ ತ್ತಾಪ ಪಡಬೇಕಾದೀತು.''

—ಸಿಡಿಲು ಖಟ್ ಖಡಿಲ್ಲೆಂದು ಸಿಡಿದಂತೆ ಪ್ರಸನ್ನಕುಮಾರರ ನುಡಿ ಹೊರಬಂದಿತ್ತು.

''ನಿಮಗೊಬ್ಬರಿಗಾಗಿ ಅಲ್ಲ ಮಿ. ಪ್ರಸನ್ನಕುಮಾರ ಆನಂದಪ್ರಭು ಗಳಿಗಾಗಿ, ನರಸಮ್ಮನಿಗಾಗಿ ಸಹ ಪಶ್ಚಾತ್ತಾಪಪಡಬೇಕಾದೀತು ನಾನು."

''ಏನಿದು ಇನ್ಸಪೆಕ್ಟರ!'' ಎಂದಿತು ಆನಂದಪ್ರಭುಗಳ ಪುರುಷಕಂಠ.

''ಇನ್ಸಪೆಕ್ಟರ ಏನು ಹುಚ್ಚುಚ್ಚಿದು !" ಎಂದಿತು ನರಸಮ್ಮನ ಸ್ತ್ರೀಕಂಠ.

''ನೀವು ಮಾತಾಡುವದೇನೆಂಬುದು ತಿಳಿದಿದೆಯೋ ನಿಮಗೆ?''— ಎಂದು ಆನಂದಪ್ರಭುಗಳು ತಮ್ಮ ಜೋತುಬಿದ್ದ ಗದ್ದಕ್ಕೆ ಆಧಾರವಿಲ್ಲದೆ

ನುಡಿದರು. ಅವರ ಗದ್ದ ಕೆಳಗೆ ಕಳಚಿ ಬೀಳುವಂತೆ ಗಡ ಗಡನೆಂದು ನಡುಗುತ್ತಿತ್ತು. ಶ್ರೀಧರ ಅದಾವುದಕ್ಕೂ ಲಕ್ಷ್ಯಗೊಡದೆ ಹೇಳಿದ.—

ನಾನು ಆಗಲೆ ನಿಮಗೆ ಕತೆಯನ್ನು ಅಪ್ರತ್ಯಕ್ಷವಾಗಿ ಹೇಳಿದ್ದೇನೆ. ಅದರಲ್ಲಿ ಸ್ವಲ್ಪ ಘಟನೆಗಳ ಹೆಚ್ಚುಕಡಿಮೆ ಇವೆ. ಕಾರಖಾನೆಯ ಬದಲು ಬಂಗಾರದ ಖಣಿ. ಲಿಯೋನಾರ್ಡನೆ ಅಶ್ವತ್ಥರಾಯ. ಪ್ರಸನ್ನಕುಮಾರರು ಈ ಕತೆ ತಮ್ಮದೆ ಎಂದು, ಆನಂದಪ್ರಭುಗಳು ಬ್ಲ್ಯಾಕಮೇಲ ರಹಸ್ಯವನ್ನು, ಅದನ್ನು ಮುಂದುವರೆಸಿದುದನ್ನು ಸಭ್ಯ ಸೋಗಿನ ಈ ನರಸಮ್ಮ ಆಗಲೆ ಮನಗಂಡಿರಬೇಕು.

ಕೊಲೆಯಾಗುವ ರಾತ್ರಿ ಮನೆಯಲ್ಲಿ ಯಾರೂ ಇರಲಿಲ್ಲ. ಆ ಪೂರ್ವ ಸಿದ್ಧತೆಯನ್ನು ಪ್ರಸನ್ನಕುಮಾರರು ಅಣಿಮಾಡಿದ್ದರು. ಅಂದು ಶೇಖರ ಮತ್ತು ನಾರಾಯಣ ಇವರಿಬ್ಬರು ಮನೆಗೆ ಬರುವರೆಂಬ ಸಂಗತಿ ಪ್ರಸನ್ನ ಕುಮಾರರಿಗೆ ತಿಳಿದದ್ದರಿಂದ ಅವರು ಮುಂಜಾಗ್ರತೆಯಿಂದ ಅಲ್ಲಿಗೆ ತೆರಳಿದರು. ಶೇಖರ ಮತ್ತು ನಾರಾಯಣರಿಗೆ ತಮ್ಮ ತಂದೆಯ ರೂಮಿನಲ್ಲಿ ಬಂಗಾರದ ಘಟ್ಟಿಗಳಿರುವ ವಿಷಯವು ತಿಳಿದಿತ್ತು. ಆದರೆ ಅಶ್ವತ್ಥರಾಯ ನಿಧಿಯನ್ನು ಕಾಯುವ ನಾಗಸರ್ಪದಂತೆ ಆ ಕೊಟಡಿಯನ್ನು ಒಂದು ಕ್ಷಣವಾದರೂ ಬಿಟ್ಟು ತೆರಳುತ್ತಿರಲಿಲ್ಲವಾದ್ದರಿಂದ ಈ ಸಹೋದರರಿಬ್ಬರಿಗೂ ಅದನ್ನು ಹಾರಿಸುವ ಸುಸಂದರ್ಭ ಒದಗಿಬರಲಿಲ್ಲ. ಆದರೆ ಕೊಲೆಯಾಗುವ ದಿನ ಎಂಟು ಗಂಟೆಗೆ ತಮ್ಮ ತಂದೆ ಆ ಕೋಣೆಯನ್ನು ಬಿಡುವರೆಂದು ಇವರಿಬ್ಬರಿಗೂ ತಿಳಿದಿತ್ತು. ಅಂದಿನ ದಿನ ಪ್ರಸನ್ನಕುಮಾರ ಅವರ ಬಳಿಯಿರುವ ಬಂಗಾರದ ಘಟ್ಟಿಗಳ ವಿಷಯವನ್ನು ಹೊರಗೆಳೆದಿದ್ದರಿಂದ ಅಶ್ವತ್ಥರಾಯರು ಹೆದರಿದ್ದರೂ ಅವನ್ನು ತೋರಿಸಿಕೊಳ್ಳಲಾರದೆ ಸಿಡಿಮಿಡಿಗುಟ್ಟುತ್ತಿದ್ದರು. ಪ್ರಸನ್ನಕುಮಾರ ೭ ಗಂಟೆಗೆ ಅಲ್ಲಿಗೆ ತೆರಳಿ ಅವರ ಕೊಲೆ ಮಾಡಿದ.

"ಇನ್ಸಪೆಕ್ಟರ ಡಾಕ್ಟರರ ಹೇಳಿಕೆಯನ್ನು ನೀವು ಮರೆತಂತೆ ಕಾಣುತ್ತದೆ. ೮–೯ ಗಂಟೆಯ ಅವಧಿಯಲ್ಲಿ ಕೊಲೆಯಾಗಿದೆ. ಆ ವೇಳೆಯಲ್ಲಿ ನಾನು ಹತ್ತು ಮೈಲು ದೂರದಲ್ಲಿರುವ ಪೋಲೀಸ ಸ್ಟೇಶನ್ನಿನಲ್ಲಿದ್ದೆ."— ಪ್ರಸನ್ನಕುಮಾರರು ಹೇಳಿದರು.

"ಹೌದು ಇನ್ಸಪೆಕ್ಟರ ೮ ಗಂಟೆಗೆ ನಮ್ಮ ತಂದೆಯವರು ಜೀವಂತರಿದ್ದರು."— ಶೇಖರ ಹೇಳಿದ.

““ಅದರ ವಿವರ ಹೇಳುವೆನು ಕೇಳಿ. ೭ ಗಂಟೆಗೇನೆ ಅಶ್ವತ್ಥರಾಯರ ಕೊಲೆಯಾಯಿತು. ಕೂಡಲೆ ಆಯುಧವನ್ನು ನಾರಾಯಣನ ಕೋಣೆಯಲ್ಲಿ ತನ್ನ ಕೈಬೆರಳುಗಳನ್ನು ಒರೆಸಿಯಿಟ್ಟ. ಸ್ವಲ್ಪ ಹೊತ್ತಿನಲ್ಲಿ ನಾರಾಯಣ ಅಲ್ಲಿಗೆ ಬರುತ್ತಿರುವದು ಪ್ರಸನ್ನ ಕುಮಾರರಿಗೆ ಕಂಡಿತು. ಹಿಂದಿನಿಂದ ಬಂದ ನಾರಾಯಣನು ಸುಮಾರು ೭-೩೦ ಕ್ಕೆ ತನ್ನ ತಂದೆಯವರ ಧ್ವನಿಯನ್ನು ಕೇಳಿ ಹೊರಟುಹೋದ. ತರುವಾಯ ಶೇಖರ ೮ ಗಂಟೆಗೆ ಅಲ್ಲಿಗೆ ಬಂದ. ಅವನಾದರೂ ದೂರದಿಂದಲೇ ತನ್ನ ತಂದೆಯ ಧ್ವನಿಯನ್ನು ಕೇಳಿ ಹೊರಟುಹೋದ. ಆದರೆ ಅವನು ಅಟ್ಟದಮೇಲಿರುವಾಗಲೇ ವೀಣಾ ಅವನನ್ನು ನೋಡಿದಳು. ಶೇಖರನಿಗೆ ಈ ವಿಷಯ ತಿಳಿಯದು. ವೀಣಾ ಅವನ ಕೈಯಲ್ಲಿರುವ ಚೂರಿಯನ್ನು ನೋಡಿ ಭಯದಿಂದ ಹೊರಟು ಹೋದಳು. ಈ ಸೋದರರಿಬ್ಬರೂ ಅಲ್ಲಿಗೆ ತೆರಳಿದಾಗ ಅಶ್ವತ್ಥರಾಯರು ಸತ್ತು ಒಂದು ಗಂಟೆಯಾಗಿತ್ತು. ಅವರ ಧ್ವನಿಯನ್ನು ಮತ್ತೆ ಕೇಳುವದು ಹೇಗೆ ಸಾಧ್ಯ? ಒಮ್ಮೆ ಪ್ರಸನ್ನ ಕುಮಾರರು ತಾವು ಇಂಜಿನಿಯರರಾಗುವ ಬದಲು ವಕೀಲರಾಗಿದ್ದೇವೆಂದೂ ಯಂತ್ರಗಳ ವಿಷಯದಲ್ಲಿ ತಮಗೆ ವಿಶೇಷ ಆಸ್ಥೆಯೆಂದು ನುಡಿದಿದ್ದರು. ಇದರಿಂದ ಅವರೇ ಶೇಖರ ಮತ್ತು ನಾರಾಯಣ ಬಂದಾಗ ಡಿಕ್ಟಾಫೋನ ಅರೇಂಜಮೆಂಟ ಮಾಡಿದ್ದರು. ಅವರಿಬ್ಬರೂ ತಮ್ಮ ತಂದೆಯಿನ್ನು ಜೀವಂತರಿದ್ದಾರೆಂದು ತಿಳಿದು ಹೊರಟುಹೋದರು. ತರುವಾಯ ಪ್ರಸನ್ನ ಕುಮಾರರು ಕೆಮಿಕಲ್ ದ್ರವ್ಯಗಳನ್ನು ಕೂಡಿಸಿದ ಬೇರೆ ರಕ್ತವನ್ನು ಅಶ್ವತ್ಥರಾಯರಮೇಲೆ ಸುರುವಿ, ಒಲೆಯಲ್ಲಿಯ ಉರಿಯನ್ನು ಪ್ರಜ್ವಲಿಸಿ ಹೊರಟುಹೋದರು. ಇದರ ಕಾರಣವೇನೆಂದರೆ ಕೊಲೆಯಾದ ನಿಜವಾದ ವೇಳೆಯನ್ನು ತಪ್ಪಿಸುವದೆ ಆಗಿದೆ.ಅವರೆಂದುಕೊಂಡಂತೆ ಅದನ್ನು ಗುರುತಿಸುವದರಲ್ಲಿ ಒಂದು ತಾಸು ಹೆಚ್ಚುಕಡಿಮೆಯಾಗಿ ಪರಿಸ್ಥಿತಿ ಹೆಚ್ಚಿಗೆ ಗಂಭೀರವಾಯಿತು. ಮುಂದೆ ಪ್ರಸನ್ನ ಕುಮಾರರು ೧೦ ಮೈಲು ದೂರದಲ್ಲಿರುವ ಪೋಲೀಸ ಸ್ಟೇಶನ್ನಿಗೆ ತೆರಳಿ ತಮ್ಮ ಕೇಸುಗಳಿದ್ದ ಯಾವದೋ ಸೂಟುಕೇಸು ಕಾರಿನಲ್ಲಿ ಬರುವಾಗ ಕಳೆಯಿತೆಂದು ಹೇಳಿ ಸುಮಾರು ೮-೯ ಘಂಟೆಯ ಅವಧಿಯಲ್ಲಿ ಅಂದರೆ ಅಶ್ವತ್ಥರಾಯರ ಕೊಲೆಯಾದ ವೇಳೆಯಲ್ಲಿ ತಾವು ಪೋಲೀಸ ಸ್ಟೇಶನ್ನಿನಲ್ಲಿರುವದಾಗಿ ಬಲವಾದ ಸಾಕ್ಷಿ ನಿರ್ಮಿಸಿಕೊಂಡರು.

ಪ್ರಸನ್ನಕುಮಾರರ ಮೇಲೆ ಸಂಶಯು ಬರಲು ಅವರು ವೀಣಳ ಹೆಸ ರಿನಿಂದ ಶೇಖರನಿಗೆ ಬರೆದ ಪತ್ರಗಳು. ಅದಕ್ಕೂ ಹೆಚ್ಚಾಗಿ ಕಾರಿನ ಅಪ ಘಾತ. ಅದನ್ನು ರಚಿಸಿದವರು. ಅವರೇಅಲ್ಲದೆ ವೀಣಳು ರೆಸ್ಟೂರೆಂಟನ್ನು ತಲುಪಿದಾಗ ಶೇಖರನದೇ ಆ ಕಾರೆಂದು ವಿಶ್ವಾಸ ಹುಟ್ಟಿಸಿದರು. ಆದರೆ ಶೇಖರ ಆ ಘಟನೆಯು ನಡೆದವೇಳೆಯಲ್ಲಿ ಬೇರೆಡೆಗೆ ಇದ್ದ. ಅವ ನನ್ನು ವಿಚಾರಿಸಿದಮೇಲೆ ನನಗೆ ಪ್ರಸನ್ನಕುಮಾರರಮೇಲೆ ಸಂಶಯು ಬಂದಿತು. ಆ ಪತ್ರಗಳನ್ನು ಅವರು ಎರಡು ಉದ್ದೇಶಗಳಿಂದ ಬರೆದಿದ್ದರು. ಒಂದನೆಯದು, ಈಭಂಗಾರದ ಘಟ್ಟಿಗಳನ್ನು ಹಾರಿಸಿದವನು ಶೇಖರನೆಂದು ತಿಳಿದು ಅವನಿಗೆ ಹೆದರಿಸಲು ಅಪ್ರತ್ಯಕ್ಷವಾಗಿ ವೀಣಳ ಹೆಸರನ್ನು ಉಪ ಯೋಗಿಸಿದರು. ಆದರೆ ಶೇಖರ ಈ ವಿಷಯುವನ್ನು ಅರಿಯದವನಾದ್ದ ರಿಂದ ಅವನು ನನಗೆ ಬಂದು ಆ ಪತ್ರವನ್ನು ತೋರಿಸಿದ. ಒಂದುವೇಳೆ ಶೇಖರನೆ ಆ ಬಂಗಾರದ ಘಟ್ಟಿಗಳನ್ನು ಅಪಹರಿಸಿದವನಾಗಿದ್ದರೆ ಅವನು ಅಂಜಿ ನನ್ನೆಡೆಗೆ ಬರುವದು ಸಾಧ್ಯವಿರಲಿಲ್ಲ. ಆ ಅಂಶ ಹಿಂದುಗಡೆ ನನಗೆ ತಿಳಿದುಬಂದಿತು. ಇದರ ಎರಡನೆಯ ಕಾರಣವೆಂದರೆ ಈ ಕೊಲೆಯ ದಾರಿಯನ್ನು ಬೇರೆಡೆಗೆ ಹೋಗುವಂತೆ ಮಾಡುವದು. ಅವರೆಂದು ಕೊಂಡಂತೆ ಈ ಪತ್ರಗಳ ವಿಷಯದಿಂದ ನನಗೇನು ಮಾಡಲಿಕ್ಕೂ ತೋಚ ಲಿಲ್ಲ. ಶೇಖರನಿಗೆ ಆ ಭಂಗಾರದ ಘಟ್ಟಿಗಳ ವಿಷಯು ತಿಳಿಯಿದೆಂದು ಅದನ್ನು ಕಳವು ಮಾಡಿದವನು ನಾರಾಯಣನೆಂದು ಅವರಿಗೆ ತಿಳಿಯಿತು. ಆಸ್ತಿಯು ತನಗೆ ದೊರೆಯದಿದ್ದುದಕ್ಕಾಗಿ ಶೇಖರ ವೀಣಳನ್ನು ಬಹಿರಂಗ ವಾಗಿ ದೂಷಿಸಿದ. ಆದರೆ ನಾರಾಯಣ ಚಕಾರ ಶಬ್ದವನ್ನೆತ್ತಲಿಲ್ಲವಾದ್ದ ರಿಂದ ಅವನ ಮೇಲೆ ಸಂಶಯು ಬರುವದು ಸಹಜವಿದೆ. ತರುವಾಯ ಪ್ರಸನ್ನಕುಮಾರರು ನಾರಾಯಣನಿಗೆ ಗಂಟುಬಿದ್ದರು. ನಾರಾಯಣ ಆ ಭಂಗಾರದ ಘಟ್ಟಿಗಳನ್ನು ಕದ್ದು ತೋಟದಲ್ಲಿ ಮುಚ್ಚಿಟ್ಟಿದ್ದ. ಒಂದು ದಿನ ಅವನು ಅದನ್ನು ನೋಡಿದಾಗ ಆಸ್ಥಳದಲ್ಲಿರಲಿಲ್ಲವಾದ್ದರಿಂದ ನಾರಾ ಯಣನಿಗೆ ಎದೆ ಒಡೆಯಿತು. ಅದಲ್ಲದೆ ಪೋಲೀಸರಿಗೆ ತನ್ನ ಮೇಲೆ ಬಲ ವಾದ ಸಂಶಯು ಬಂದಿದೆಯೆಂದು ಅವನಿಗೆ ತಿಳಿದು ಹೆಚ್ಚು ದಿನ ತಡೆದರೆ ಈ ಕೊಲೆಯ ಆಪಾದನೆಯು ತನ್ನ ಮೇಲೆ ಬರುವದೆಂದು ಎಲ್ಲವನ್ನು

ಹೇಳುವೆನೆಂದು ನನಗೆ ಫೋನು ಮಾಡಿದ. ಆದರೆ ಅವನು ಅಂದು ಬರಲಿಲ್ಲ. ಬಹುಶ ಪ್ರಸನ್ನಕುಮಾರರು ಅಂದು ನನ್ನ ಹೆಸರಿನಿಂದ ಅವನಿಗೆ ಫೋನು ಮಾಡಿ ಅವನನ್ನು ಕೊಲೆಯ ವಿಷಯವಾಗಿ ಅರೆಸ್ಟ ಮಾಡಿರುವದಾಗಿ ತಿಳಿಸಿರಬಹುದು. ನಾರಾಯಣ ಹೆದರಿ ಫರಾರಿಯಾದ. ಪ್ರಸನ್ನಕುಮಾರರ ಕೈಗೆ ಅವನು ಸಿಕ್ಕುಬಿದ್ದ. ಅಲ್ಲಿ ಅವನು ಭಂಗಾರದ ಘಟ್ಟಿಗಳ ವಿಷಯ ತನಗೇನು ತಿಳಿಯದೆಂದು ಹೇಳಿದ್ದರ ಸಲುವಾಗಿ ಅವನ ಕೊಲೆಯಾಯಿತೆಂದು ಕಾಣುತ್ತದೆ. ನಾರಾಯಣನ ಕೊಲೆಯ ಉಪಯೋಗವನ್ನು ಪ್ರಸನ್ನಕುಮಾರರು ಚೆನ್ನಾಗಿ ಉಪಯೋಗ ಮಾಡಿಕೊಂಡರು. ಕೊಲೆಗಾರ ತಾನೇ ಕೊಲೆ ಮಾಡಿರುವೆನೆಂದು ಹೇಳಿ ಆತ್ಮಹತ್ಯವನ್ನು ಮಾಡಿಕೊಂಡನೆಂದಮೇಲೆ ಆ ಪ್ರಕರಣ ಅಲ್ಲಿಗೆ ಮುಗಿಯಿತೆಂದು ಅವರು ತಿಳಿದರು, ಜನರು ಆ ರೀತಿಯಾಗಿಯೇ ಗ್ರಹಿಸಿದರು.

ಆನಂದಪ್ರಭುಗಳು ಅಶ್ವತ್ಥರಾಯರ ವಿಷಯ ಹೇಳುವಾಗ ಅನೇಕ ರಹಸ್ಯಗಳನ್ನು ಮುಚ್ಚಿಟ್ಟರು. ಸುಮಾರು ೮ ವರುಷಗಳ ಹಿಂದೆ ಅವರ ಮೋಟಾರ ಕಂಪನಿ ದಿವಾಳಿ ತೆಗೆಯುವದಿತ್ತು. ಆದರೆ ಅಶ್ವತ್ಥರಾಯನ ಚರಿತ್ರೆಯನ್ನು ತಿಳಿದ ಅವರು ಬ್ಲ್ಯಾಕಮೇಲ ಮಾಡಲು ಆರಂಭಿಸಿದರು. ತಮ್ಮ ಸ್ಥಿತಿಯು ಸುಧಾರಿಸಿದ ಮೇಲೆ ಅದನ್ನು ಬಿಟ್ಟು ಬಿಟ್ಟರು.

ಅದನ್ನು ಮುಂದುವರೆಸಿದವಳು ಈ ನರಸಮ್ಮ. ಅಶ್ವತ್ಥರಾಯರನ್ನು ಯಾರೋ ಬ್ಲ್ಯಾಕಮೇಲ ಮಾಡುತ್ತಾರೆಂದು ಇವಳಿಗೆ ತಿಳಿದುಬಂದಿತ್ತು. ಇವಳ ಗಂಡನೊಬ್ಬ ಪೋಕರಿ. ಎಷ್ಟೋ ಸಲ ಅವನು ಜೇಲನ್ನು ಕಂಡಿದ್ದಾನೆ. ಅವನಿಗೆ ಹಣ ಪೂರೈಸುವದರ ಸಲುವಾಗಿ ಇವಳು ಬ್ಲ್ಯಾಕಮೇಲ ಆರಂಭಿಸಿದಳು. ನಾನು ಈ ಮನೆಗೆ ಬಂದಾಗಲೆಲ್ಲ ನರಸಮ್ಮ ನನ್ನ ಚಲನವಲನವನ್ನು ರಹಸ್ಯವಾಗಿ ವಾಚ ಮಾಡುತ್ತಿದ್ದಳು. ಆ ಬಂಗಾರದ ಘಟ್ಟಿಗಳನ್ನು ಹೊತ್ತು ಬೇರೆಡೆಗೆ ಸಾಗಿಸುತ್ತಿದ್ದವಳು ಇವಳೆ. ಇದನ್ನೆಲ್ಲ ಕಂಡುಹಿಡಿಯಲು ನನ್ನ ಹಸ್ತಕ ರಾಜಾರಾಮ ಬಹಳ ಸಹಾಯ ಮಾಡಿದ್ದಾನೆ.'' —ಶ್ರೀಧರ ತನ್ನ ಹೇಳಿಕೆಯನ್ನು ಮುಗಿಸಿ ಹೊರಬಂದ. ಜೋಸೆಫರು ತಮ್ಮ ಮುಂದಿನ ಕಾರ್ಯವೇನೆಂದು(ಗ್ರಹಿಸಿ ಆ ರೀತಿಯಾಗಿ

ಮಾಡಿದರು. ಶ್ರೀಧರ ಬೆಳದಿಂಗಳ ಸವಿಯನ್ನು ಸವಿಯುತ್ತ ಬಾನಿನಲ್ಲಿಯ ಸಹಸ್ರಾರು ತಾರೆಗಳ ಚೆಲುವನ್ನು ನೋಡುತ್ತ ಗೇಟಿನ ಹತ್ತಿರ ಬಂದ.

"ಶೇಖರ, ಇನ್ಸಪೆಕ್ಟರರನ್ನು ಹಾಗೆಯೇ ಹೋಗಲು ಬಿಡಬೇಡ. ಅವರೂ ಮಾಯವಾದಾರು." ಒಳಗಿನಿಂದ ವೀಣಾ ಕೂಗಿದಳು. ಆ ಧ್ವನಿ ಶ್ರೀಧರನಿಗೆ ಕೇಳಿಸದಿರುತ್ತದೆಯೆ !

ಕಾಲುಗಳು ಅವನಿಗೆ ತಿಳಿಯದಂತೆ ಅವನ ದೇಹವನ್ನು ಹೊತ್ತು ಕೊಂಡು ಮರಳಿ ಬಂದವು.



# ಅಕ್ಕಮಹಾದೇವಿಯವರ ವಚನಗಳು
## ಭಾವಾರ್ಥ ಸಹಿತ

**ಸಂಪಾದಕರು : ಕೆ. ಎಸ್. ಹೆಬಸೂರ** **ಬೆಲೆ : ೮ ಆಣೆ ಮಾ** [illegible]

## — ಕೆಲವು ಅಭಿಪ್ರಾಯಗಳು —

..."ಜಗತ್ತು ಕಂಡರಿಯದಂಥ ವೈರಾಗ್ಯತಾಳಿ, ನಿಮಿತ್ಯ ಮಾತ್ರಕ್ಕೆ ಕೌಶಿಕ ರಾಜನ ಕೈ ಹಿಡಿದು ಅದಷ್ಟು ಬೇಗ ಸಂಸಾರದ ಶೃಂಖಲೆಗಳನ್ನು ಕಿತ್ತೊಗೆದು ಅತಿ ವಿನೂತನವಾದ ರೀತಿಯಲ್ಲಿ ಚನ್ನಮಲ್ಲಿಕಾರ್ಜುನನನ್ನು ಅರಸಿ ಶ್ರೀಶೈಲದತ್ತ ಹೊರಟು ಶಿವನಲ್ಲಿ ಒಂದಾದ ಶಿವಶರಣೆ ಅಕ್ಕಮಹಾದೇವಿ. ಇವರ ಹೆಸರನ್ನು ಕೇಳದ, ಭಕ್ತಿಭಾವದಿಂದ ಸ್ಮರಿಸದ ಕನ್ನಡಿಗರು ಅತಿ ವಿರಳ. ... ಬರೀ ಧಾರ್ಮಿಕ ತತ್ತ್ವಬೋಧೆ ಮಾತ್ರವಲ್ಲದೆ, ಜನಸಾಮಾನ್ಯರಿಗೂ ಮುಟ್ಟುವಂತೆ ಹೃದ್ಯವಾದ ಶೈಲಿಯಲ್ಲಿ ಶಿವಶರಣರ ವಚನಗಳು ರಚಿತವಾಗಿರುವದೇ ವಚನಗಳ ಜನಪ್ರಿಯತೆಯ ಗುಟ್ಟು. ಅದರಲ್ಲೂ ಕೆಲವು ವಚನಗಳ ಲಾಲಿತ ಅರ್ಥದ ವಿಸ್ತಾರ ಶ್ರೇಷ್ಠ ಸಾಹಿತ್ಯಕ್ಕೆ ಹೆಗ್ಗುರುತು. ಶ್ರೀ ಹೆಬಸೂರ ಅವರ ಅಕ್ಕಮಹಾದೇವಿಯವರ ವಚನಗಳನ್ನು ಭಾವಾರ್ಥ ಸಹಿತ ಪ್ರಕಟಮಾಡಿರುವದು ಸ್ತುತ್ಯ ಯತ್ನ.... ... ಕೆಲವೊಮ್ಮೆ ಕ್ಲಿಷ್ಟವೆನಿಸಬಹುದಾದ ಪದಗಳಿಗೆ ಪುಸ್ತಕದ ಕೊನೆಯಲ್ಲಿ ಶ್ರೀ ಹೆಬಸೂರ ಅವರು ಅರ್ಥವನ್ನುಕೊಟ್ಟಿರುವದು ಓದುಗನಿಗೆ ಸಹಾಯಕವಾಗಿದೆ."

"ಜನಪ್ರಗತಿ" ಜನವರಿ, ೨೨ ೧೯೫೬

...‘‘ಮಾನವರನ್ನು ಅಹಿಂಸೆ, ಸತ್ಯ, ಧರ್ಮ ಮತ್ತು ಭಕ್ತಿ ಮಾರ್ಗಗಳಲ್ಲಿ ಒಯ್ಯಲು ಈ ಗ್ರಂಥವು ಹೆಚ್ಚು ಮಾರ್ಗದರ್ಶಿಯಾಗಿರುತ್ತದೆ. ಮುಮುಕ್ಷುಗಳು ದಿನಂಪ್ರತಿ ಪಠಣ ಮಾಡಿ, ಮನನ ಮಾಡಲು ಹೆಚ್ಚು ಉಪಯೋಗವಾಗಿರುವ ಗ್ರಂಥವಿದು. ಇಂಥಾ ಮಹಿಳೆಯ ವಚನಗಳನ್ನು ಸುಲಭವಾಗಿ ಗ್ರಾಹ್ಯವಾಗುವಂತೆ ಅರ್ಥದೊಂದಿಗೆ ಜನಗಳ ಮುಂದೆ ಇಟ್ಟಿರುವ ಗ್ರಂಥದ ಸಂಗ್ರಹಕಾರರೂ ಮತ್ತು ಪ್ರಕಾಶಕರೂ ಪರಮಪಿತನ ಸೇವೆ ಮತ್ತು ಭಾಷಾ ಸೇವೆಗಳ ಮೂಲಕ ಭಾರತ ಮಾತೆಯ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ." "ಸತ್ಯವಾದಿ" ೮-೧-೫೬

...‘ಇಂಥವು ನಮ್ಮ ನಾಡಿನ ಪ್ರತಿವಾಚನಾಲಯಗಳಲ್ಲಿಯೂ ಸೇರಿಕೊಳ್ಳಬೇಕು, ಅದರಲ್ಲಿರತಕ್ಕ ಧರ್ಮದ ತಿರುಳನ್ನು ಗ್ರಹಿಸಿ, ಜ್ಞಾನದ ಮಟ್ಟವನ್ನು ಬೆಳಸಿಕೊಳ್ಳುವದು ವಾಚಕರ ಕರ್ತವ್ಯ. ‘ರಾಷ್ಟ್ರಮತ’ ೨-೧೨-೧೯೫೫

**ಸಿಟಿ ಬುಕ್ ಸ್ಟಾಲ್, ದುರ್ಗದ-ಬೈಲ ಹುಬ್ಬಳ್ಳಿ.**